# ಬೆಳದಿಂಗಳ ರಾತ್ರಿ

ಮಲ್ಲಿಕಾ

ಸೆತ್ ತಿಕ್ಷಣದಿಂದೆ
ನಲ್‌ಯೋಜನೆ ನಿಂದು
ದಲ್ ಲಕ್ಷ್ಮಿಯು ಮುಂದೆ

# ಬೆಳದಿಂಗಳ ರಾತ್ರಿ

(ಶಿಶು ಸಾಹಿತ್ಯ)

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು–25

# ನಿವೇದನೆ

ಮಕ್ಕಳಿಗಾಗಿ ಸಾಹಿತ್ಯ....ಮುಗ್ಧ ಮನದ ಮುದ್ದು ಮಕ್ಕಳ ಬುದ್ಧಿಯನ್ನು ದಳದಳವಾಗಿ ಅರಳಿಸಿ ಓದು ವಿದ್ಯೆಯ ಕಡೆ ಸುಲಭದಲ್ಲಿ ಆಕರ್ಷಿಸುವ ಸಲುವಾಗಿ ಸರಳ ರಸಭರಿತ ಸಾಹಿತ್ಯ ಸೃಷ್ಟಿಯ ಅಗತ್ಯ ಇಂದು ತುಂಬಾ ಇದೆ. ಮಕ್ಕಳಿಗೆ ಗಿಡ, ಮರ, ಪ್ರಾಣಿ-ಪಕ್ಷಿಗಳಲ್ಲಿ ಪ್ರೇಮ ಮತ್ತು ಆಸಕ್ತಿ.

ಆದ್ದರಿಂದ ಪ್ರಾಣಿ ಪ್ರಪಂಚದ ಮೂಲಕ ಸಣ್ಣ ಸಣ್ಣ ಕತೆಗಳ ಸುರಿಮಳೆ ಎಷ್ಟಿದ್ದರೂ ನಮ್ಮ ದೇಶಕ್ಕೆ ಸಾಲದು ಎಂಬುದು ಸರ್ವ ವೇದ್ಯ. ಬರೆಯುವುದೇನೋ ಹೇಗೂ ಆದೀತು. ಪ್ರಕಟಣ ಕಾರ್ಯ ಇಂದು ಎಲ್ಲರಿಗೂ ಸಿಂಹಸ್ವಪ್ನ. ಬೆಲೆಗಳು ಗಗನಕ್ಕೆ ಏರಿ ನಿಂತಿವೆ. ಗ್ರಾಹಕರೂ ಕೊಳ್ಳುವ ಸ್ಥಿತಿಯಲಿಲ್ಲ. ಪ್ರಸ್ತುತ ಪರಿಸ್ಥಿತಿಯ ಅರಿವಿದ್ದು, ಕವಿಗಳಿಗೆ ಎಲ್ಲಾ ರೀತಿಯಿಂದಲೂ ಸಹಾಯ ಮಾಡ ಬೇಕಾದ ಸರಕಾರ ಮೊಗತಿರುವಿರುವುದರಿಂದ ಲೇಖನ ಕೃಷಿಗೆ ತಿಲಾಂ ಜಲಿ ಬಿಡುವಂತಹ ಕಠಿಣ ಪ್ರಸಂಗ ಒದಗಿದೆ.

ಇನ್ನಾದರೂ ಉತ್ತಮ ಸಾಹಿತ್ಯಕ್ಕೆ ಸರಕಾರ ಸಹಾಯ ನೀಡಿ ಸಹಕರಿಸಿದರೆ ಮಾತ್ರ ಪ್ರಕಟಣ ಕಾರ್ಯಕ್ಕೆ ಬೆಳಕು. ಇಲ್ಲದಿದ್ದರೆ ಕವಿಗಳ ಶವದೊಂದಿಗೇ ಸಾಹಿತ್ಯವನ್ನೂ ಹುಗಿಯುವ ಪ್ರಸಂಗ ಬರುತ್ತದೆ.

ಲಕ್ಷ್ಮೀ ಪ್ರಕಾಶನ ಮಾಲೆಯಲ್ಲಿ ಇದೇ ಪ್ರಪ್ರಥಮವಾಗಿ ಪ್ರಕಟಗೊಳ್ಳುತ್ತಿರುವ "ಶಿಶು ಸಾಹಿತ್ಯ" ವಾದ "ಬೆಳೆದಿಂಗಳ ರಾತ್ರಿ" ಇಪ್ಪತ್ತೆಂಟನೆಯ ಕಥಾ ಗುಚ್ಛ ಎಂದು ತಿಳಿಸಲು ಹರ್ಷಿಸುವೆ. ಮಕ್ಕಳು ಈ ಕತೆಗಳನ್ನು ಓದಿ ಆನಂದಿಸುವುದಾದರೆ ನನ್ನ ಲೇಖನಿಯ ಶ್ರಮ ಸಾರ್ಥಕ.

ಮಲ್ಲಿಕಾ
25-4-85

# ಬೆಳದಿಂಗಳ ರಾತ್ರಿ

ಭೂಮಿಯಮೇಲೆ ಇರುಳುಗತ್ತಲೆ ಕವಿಯಿತು.

ಜನರೆಲ್ಲಾ ಮನೆಯ ಬಾಗಿಲುಗಳನ್ನು ಮುಚ್ಚಿಕೊಂಡು ದೀಪನಂದಿಸಿ ಹಾಸಿಗೆ ಸೇರಿದರು.

ಮನೆಗಳ ದೀಪ ಆರಿದಮೇಲೆ ಊರೆಲ್ಲಾ ಕತ್ತಲು. ಬಿಲಬಿಲಗಳಲ್ಲಿ ಅಡಗಿ ಕುಳಿತಿದ್ದ ಇಲಿಗಳೆಲ್ಲಾ ಹೊರಬಂದುವು. ಒಂದೇ, ಎರಡೇ, ಹತ್ತೇ? ನೂರಾರು ಇಲಿಗಳ ದಂಡು! ಎಲ್ಲಿ, ಯಾವಕಡೆ ತಿನ್ನಲು ಸಿಗುವುದೋ ಎಂದು ಎಲ್ಲ ಕಡೆಯೂ ಮೂಸಿ ಮೂಸಿ ನೋಡಿ ವಾಸನೆ ಹಿಡಿಯುತ್ತ ಅಡ್ಡಾಡುತ್ತಿರುವಾಗಲೇ ಮೂಡಣದಲ್ಲಿ ಪೂರ್ಣಚಂದ್ರ ಮೂಡಿ ಬಂದ. ಹಾಲ್ದಿಂಗಳು ಎಲ್ಲೆಡೆಯೂ ಹರಿಯಿತು. ಇಲಿಗಳು ಹರುಷದಿಂದ ಪರಸ್ಪರ ಮುಖನೋಡಿಕೊಳ್ಳುತ್ತ 'ನಿನಗೇನು ಸಿಕ್ಕಿತು?' 'ನಿನಗೇನು ಸಿಕ್ಕಿತು?' ಎಂದು ಕೇಳಿಕೊಳ್ಳುತ್ತಲೇ ಆಹಾರಕ್ಕಾಗಿ ಹುಡುಕಾಡುತಿದ್ದುವು.

ಒಂದು ಪುಟ್ಟ ಇಲಿ ಓಡೋಡಿ ಬಂದು ಹೇಳಿತು 'ಓ! ಅಲ್ಲಿ ಭತ್ತದ ರಾಶಿ ಇದೆ!'

'ಎಲ್ಲಿ, ಎಲ್ಲಿ?' ಅನೇಕ ಇಲಿಗಳು ಕೇಳಿದುವು.

'ಕಣದಲ್ಲಿ! ದೊಡ್ಡ ರಾಶಿಯೇ ಇದೆ ಬನ್ನಿ! ಬನ್ನಿ!'

ಆ ಕೂಡಲೇ ಹಲವಾರು ಇಲಿಗಳು ಅತ್ತ ನುಗ್ಗಿದುವು.

'ಅಯ್ಯೊ, ದೇವರೆ! ಈ ಹಾಲ್ಬೆಳಕಿನಲ್ಲಿ ನಾವು ಅಲ್ಲಿಗೆ ಹೋದರೆ ಕಾವಲುಗಾರರ ಕಣ್ಣಿಗೆ ಖಂಡಿತ ಕಾಣುತ್ತೇವೆ! ಏನು ಮಾಡೋಣ?'

'ಈ ಚಂದ್ರ ಯಾಕಾಗಿ ಬಂದನೋ? ಇವನಿಗೆ ಸಾವು ನೋವು ಯಾವುದೂ ಇಲ್ಲ! ಹಾ! ನಮಗಾದರೆ ಎಲ್ಲಾ ಉಂಟು!'

ಆ ಮಾತು ಕೇಳಿ ಎಲ್ಲಾ ಇಲಿಗಳೂ ಒಮ್ಮೆ ಇದ್ದಲ್ಲೇ ನಿಂತು ಬಿಟ್ಟುವು.

'ಇದಕ್ಕೇನು ಉಪಾಯ?' ಕೇಳಿತೊಂದು ಇಲಿ.

'ನಮ್ಮ ಕಪ್ಪನೆಯ ದಂಡು ಚೆನ್ನಾಗಿ ಕಾಣಿಸುತ್ತದೆ.'

'ಹೌದಲ್ಲಾ? ಈ ಚಂದ್ರನಿಂದ ನಮಗೆ ಗೋಳು!'

'ಯಾವುದಾದರೂ ಹಿರಿಯ ಮೋಡ ಮರೆಯಾದರೆ ನಾವು ಕಣಕ್ಕೆ ಹೋಗಬಹುದು.'

'ಅಲ್ಲಿಯತನಕ ಕಾಯುವುದೆಲ್ಲಿ? ಈಗ ಏನು ಮಾಡೋಣ?'

'ಈಗ ಏನು ಮಾಡೋಣ?' ಮತ್ತೆ ಮತ್ತೆ ಅದೇ ಪ್ರಶ್ನೆ ಕೇಳಿಬರತೊಡಗಿತು.

'ನಾವು ಒಟ್ಟಾಗಿ ಹೋಗುವುದೇ ಬೇಡ,' ಎಂದಿತು ಒಂದು ಇಲಿ.

'ಅದು ಸರಿ. ನಾನು ಹೋಗಿ ಕಾವಲಿನ ಜನ ಮಲಗಿದ್ದಾರೋ, ಎಚ್ಚರವಾಗಿದ್ದಾರೋ ನೋಡಿಬರುವೆ. ನಿದ್ದೆ ಮಾಡಿದ್ದರೆ ಎಲ್ಲರೂ ಹೋಗೋಣ.'

'ಆಗಲಿ, ಆಗಲಿ'.

ಆ ಕೂಡಲೇ ಒಂದೆರಡು ಇಲಿಗಳು ಅತ್ತ ಓಡಿದುವು. ನೋಡಿದರೆ, ಆ ಕಾವಲುಗಾರರು ಗುಸುಗುಸು ಮಾತಾಡುತಿದ್ದಾರೆ!

ಒಬ್ಬ ಹೇಳಿದ 'ಕಳ್ಳರ ಕಾಟಕ್ಕಿಂತ ಇಲಿಗಳ ಕಾಟವೇ ಹೆಚ್ಚು!'

'ಅವನ್ನು ನಿರ್ನಾಮ ಮಾಡದ ಹೊರತು ನಮಗೆ ಸುಖವಿಲ್ಲ. ನಾವು ಬೆಳೆದ ದವಸ-ಧಾನ್ಯ ದಲ್ಲಿ ಕಾಲುಭಾಗ ಇಲಿಗಳಿಗೇ ಹೋಗುತ್ತದೆ!'

'ಅವನ್ನು ನಿವಾರಿಸುವುದು ಅಷ್ಟು ಸುಲಭ ವಲ್ಲ.'

'ನಿನಗೊತ್ತಿಲ್ಲ....ನಾನೊಂದು ಉಪಾಯ ಮಾಡಿದ್ದೀನಿ!'

'ಏನು ಹೇಳು?'

'ಕೇಳು! ಈ ಕಣಕ್ಕೆ ಗದ್ದೆ ಕಡೆಯಿಂದ ಬರುವ ಗಂಡಿಯಲ್ಲಿ ಒಂದು ದೊಡ್ಡ ಟಾರ್ ಡಬ್ಬಿ ಯನ್ನು ಒಡ್ಡಿರುವೆ. ಆ ದಾರಿಯಲ್ಲಿ ಬಂದವೆಲ್ಲಾ ಅದರಲ್ಲಿ ಬೀಳಲೇ ಬೇಕು. ನೂರಾರು ಇಲಿಗಳು ಬಿದ್ದು ಖಂಡಿತ ಸಾಯುತ್ತವೆ!'

'ಹೌದೇ? ಬಿಡು, ಸಾಯಲಿ!'

ಅಷ್ಟು ಹೇಳಿದ್ದೇ ತಡ ಆ ಇಲಿಗಳು ಅಲ್ಲಿಂದ ಓಟ ಕಿತ್ತುವು. ಅವು ದೌಡೆದ್ದು ತಮ್ಮ ಕಡೆಗೆ

ಧಾವಿಸಿ ಬಂದುದನ್ನು ಕಂಡ ಇತರ ಇಲಿಗಳು ಕೇಳಿ ದುವು 'ಏನು ಸಮಾಚಾರ?'

'ಆ ದುಷ್ಟ ಕಾವಲುಗಾರರು ಎಚ್ಚರಿರು ವುದಲ್ಲದೆ ನಾವು ಗದ್ದೆಯಿಂದ ನುಗ್ಗಿ ಬರುವ ದಾರಿಗೆ ಟಾರ್ ಡಬ್ಬವೊಡ್ಡಿ ನಮ್ಮನ್ನು ಕೊಲ್ಲುವ ಸಂಚು ಹೂಡಿದ್ದಾರೆ! ನಾವು ನೇರವಾಗಿ ಭತ್ತದ ರಾಶಿಯ ಕಡೆಗೆ ಹೋಗಿದ್ದಿದ್ದರೆ ನಮ್ಮ ಗತಿ ಮುಗಿಯುತಿತ್ತು!'

'ನೀವು ಹೋಗಿ ತಿಳಿದುಕೊಂಡು ಬಂದುದು ಒಳ್ಳೆಯದಾಯ್ತು?'

'ಎಲ್ಲರೂ ಹಿಂದಿರುಗೋಣ....'

'ಆಯ್ತಾಯ್ತು.'

ಕೂಡಲೇ ಎಲ್ಲಾ ಇಲಿಗಳು ಬುಳುಬುಳು ಓಡಿದುವು. ಹಿಂದುಗಡೆಯಿಂದ ಓಡಿಬರುತ್ತಿದ್ದ ಇಲಿ ಯೊಂದು ಚಂಗನೆ ಮುಂದೆ ನೆಗೆದು 'ಎಲ್ಲರೂ ಗಿಡಮರಗಳ ನೆರಳಿನಲ್ಲಿ ಹೋಗಿ. ಬಯಲಲ್ಲಿ ಓಡಿ ದರೆ ಹಾಲ್ಬಿಂಗಳಲ್ಲಿ ಎಲ್ಲರಿಗೂ ಕಾಣಿಸುತ್ತೆ!'

'ಕಂಡರೇನು ಬಿಡು!'

'ಓ! ನಿಮಗೊತ್ತಿಲ್ಲ? ಹಾದಿಹಾದಿಗೂ ಟಾರ್‌ಡಬ್ಬ ಒಡ್ಡುತ್ತಾರೆ!'

'ಹೌದು. ಹೌದು! ಬೆಳದಿಂಗಳು ಇರಬಾರದಿತ್ತು!'

ಇಲಿಗಳೆಲ್ಲಾ ಗಿಡಮರಗಳ ನೆರಳಿನಲ್ಲಿಯೇ ನಡೆದು ತಮ್ಮ ತಮ್ಮ ಬಿಲ ಸೇರಿಕೊಂಡುವು. ಹಗಲೆಲ್ಲಾ ಹೊರಬರಲಾಗಲಿಲ್ಲ. ರಾತ್ರಿಯೂ ಕಾಳುಸಿಗಲಿಲ್ಲ. ಹೊಟ್ಟೆಯಲ್ಲಿ ಹಸಿವೋ ಹಸಿವು.

ಆಕಾಶದಲ್ಲಿ ಚಂದ್ರ ನಗುತ್ತಲಿದ್ದ.



# ಜಿಂಕೆಯ ಬುದ್ಧಿವಂತಿಕೆ

ಗಿಡ ಮರಗಳಿಂದ ಕೂಡಿದ ಒಂದು ಕಾಡು.

ಅದರಲ್ಲಿ ಭಯಂಕರ ಹುಲಿಯು ವಾಸ. ಅದು ಪ್ರಾಣಿಗಳ ಬೇಟೆಯಲ್ಲಿ ತುಂಬಾ ಚಾಣಾಕ್ಷ. ಅದರ ಕಣ್ಣಿಗೆ ಬಿದ್ದಮೇಲೆ ಯಾವೊಂದು ಪ್ರಾಣಿಯೂ ತಪ್ಪಿಸಿಕೊಳ್ಳುವುದು ಕಷ್ಟ. ಆದ್ದರಿಂದ ಪ್ರಾಣಿಗಳಿಗೆ ಜೀವ ಭಯದಿಂದ ಮೈಯೆಲ್ಲಾ ಕಣ್ಣು-ಕಿವಿಗಳಿದ್ದಷ್ಟು ಎಚ್ಚರಿಕೆ. ಹೀಗಾಗಿ, ಹುಲಿಗೆ ಪ್ರಾಣಿಗಳು ಸಿಗದೆ ಉಪವಾಸ ವಿರುವ ಪ್ರಸಂಗವೇ ಹೆಚ್ಚು.

ಹಸಿವೆಯಾದಷ್ಟೂ ಹುಲಿಗೆ ಸಿಟ್ಟು-ರೋಷ.

ಒಮ್ಮೆ ಬಾಯಿ ಬಿಟ್ಟಿತೆಂದರೆ ಕಾಡೆಲ್ಲಾ ನಡಗುವಂತಹ ಘರ್ಜನೆ!

ಅದರಿಂದ ಪ್ರಾಣಿಗಳಿಗೆ ಇನ್ನೂ ಒಳ್ಳಿತೇ ಆಯಿತು. ಅವು ದೂರ ದೂರ ಜಿಗಿದೋಡಿದರೆ ಹುಲಿಗೆ ಎಲ್ಲಿಯ ಆಹಾರ? ಹೊಟ್ಟೆಯಲ್ಲಿ ಹಸಿವು!

ಈ ಕಾಡಿಗೆಲ್ಲಾ ನಾನೇ ರಾಜ! ಎಲ್ಲಾ ಪ್ರಾಣಿಗಳೂ ದಿನಕ್ಕೊಂದರಂತೆ ಅದೇ ಬಂದು ಬಾಯಿಗೆ ಬೀಳಬೇಕು! ಅದಲ್ಲದೆ, ಇವು ಅಡಗಿ ಕೊಳ್ಳುವುದೆಂದರೇನು? ಎಂದು ಸಿಟ್ಟಿನಿಂದ ಮತ್ತೆ ಮತ್ತೆ ಘರ್ಜಿಸಿತೆಂದರೆ ಪ್ರಾಣಿಗಳಿರಲಿ, ಹಕ್ಕಿ ಗಳೂ ಅಲ್ಲಿಂದ ಹಾರಿ ಹೋಗುತ್ತಿದ್ದುವು.

ಹುಲಿ ಪೆಚ್ಚು ಮೋರೆಯಿಂದ ಮರದಡಿ ಬಿದ್ದಿರುತಿತ್ತು. ಒಮ್ಮೆ ನಿದ್ದೆ. ಒಮ್ಮೆ ಕನಸು. ಇನ್ನೊಮ್ಮೆ ಮುಂಪರ. ಎಚ್ಚರವಾದನಂತರ ಹೊಟ್ಟೆ ಹಸಿವೆಯು ಗೋಳು!

ಇಲ್ಲಿ ಒಂದೂ ಪ್ರಾಣಿ ಉಳಿಯದಂತೆ ಮುಗಿಸದಿದ್ದರೆ ನಾನು ಕಾಡಿನ ರಾಜನೇ ಅಲ್ಲ! ಎಂದು ತನ್ನಲ್ಲೇ ಶಪಥ ಮಾಡಿಕೊಂಡು ಕಣ್ಣಿನ ಮೇಲೆ ಕಣ್ಣಿಟ್ಟು ಸದ್ದಿಲ್ಲದೆ ತಿರುಗಾಡುತ್ತ ಪ್ರಾಣಿ ಗಳನ್ನು ಅರಸುತಿತ್ತು ಹುಲಿ. ಹಗಲು ರಾತ್ರಿ ಅನಕ್ಕೆ ಅದೇ ಕೆಲಸ. ಹಸುರು ಹುಲ್ಲು ಇರುವ ಕಡೆ, ಚಿಗರು ಸೊಪ್ಪು ಇರುವ ಕಡೆ, ತೊರೆಯ ನೀರು ಹರಿಯುವ ಕಡೆ ಕಣ್ಣಿಡುವುದೇ ಅದರ ಕೆಲಸ.

ಒಮ್ಮೆ ದೂರದಲ್ಲಿ ಅಕಸ್ಮಾತ್ ಜಿಂಕೆ ಮರಿ ಯೊಂದು ಕಂಡಿತು, ಆ ಕ್ಷಣವೇ ಅದು 'ಅಣ್ಣಾ!

ಸಾರಂಗಣ್ಣಾ! ಹುಲಿರಾಜ ಬಂತು! ಎದ್ದೇಳು!!'
ಎಂದು ಕೂಗಿಕೊಂಡಿತು.

ಆ ಮಾತು ಕೇಳಿ ಹುಲಿಯು ಕಿವಿಗಳು ನೆಟ್ಟಗಾದುವು. ಜಿಂಕೆಮರಿಗಿಂತ ಸಾರಂಗ ಸಿಕ್ಕಿದರೆ ಆಹಾರ ಸಂಮೃದ್ಧಿ! ಈ ಮರಿ ಒಂದು ತುತ್ತಿಗೂ ಸಾಲದು. ಸಾರಂಗವನ್ನು ಈಗಲೇ ಹಿಡಿವೆ ಎಂದು ಕೊಂಡು ಆತುರದಿಂದ ಕೇಳಿತು 'ಎಲ್ಲಿದೆ ಸಾರಂಗ?'

ದೂರದ ಬಂಡೆಯೆಡೆಗೆ ಕೈ ತೋರಿ ಜಿಂಕೆ ಮರಿ ಹೇಳಿತು 'ಅದೋ ಆ ಬಂಡೆಯ ಮಗ್ಗುಲಿಗೇ ಬಿಸಿಲು ಕಾಯಿಸುತ್ತ ಮಲಗಿದೆ. ಕಾಡಿನ ರಾಜ ಬಂದರೂ ಏಳಬಾರದೇ?'

ಅದರ ಮಾತನ್ನು ಕೇಳಿ ಅತ್ತ ಚಂಗನೆ ಹಾರಿತು ಹುಲಿ!

ಅದು ಅತ್ತ ಹಾರುತ್ತಲೂ ಜಿಂಕೆ ಇತ್ತ ಓಟ ಕಿತ್ತಿತು.

ಹುಲಿ ಅಲ್ಲಿ ಹೋಗಿ ನೋಡಿದರೆ ಎಲ್ಲಿದೆ ಸಾರಂಗ? ಸಾರಂಗವೂ ಇಲ್ಲ, ಏನೂ ಇಲ್ಲ. ಅದು ರೋಷದಿಂದ ಕೆರಳಿ ಜಿಂಕೆಮರಿಯಿದ್ದ ಕಡೆಗೆ ನೆಗೆಯಿತು. ನೆಗೆದ ಭರಕ್ಕೆ ಕಲ್ಲು ಬಂಡೆಗೆ ಡಿಕ್ಕಿ

ಹೊಡೆಯಿತು. ಹಾ, ಎಂತಹ ನೋವು! ಕೆಟ್ಟ ಜಿಂಕೆ ನರಿ ಮೋಸ ಮಾಡಿತು! ಅದೊಮ್ಮೆ ಸಿಕ್ಕಲಿ! ಅದನ್ನು ಛಿದ್ರ ಛಿದ್ರಮಾಡಿ ತಿನ್ನದಿದ್ದರೆ!' ಎನ್ನುತ್ತ ಹಲ್ಲು ಕಡಿಯಿತು ಹುಲಿ.

ಆದರೆ, ಆ ಬುದ್ಧಿವಂತ ಜಿಂಕೆ ಎಲ್ಲಿ ಓಡಿತ್ತೋ....



# ಬ್ರೌನಿ

ಹೊಂಬಣ್ಣದ ಮುದ್ದು ನಾಯಿಯ ಹೆಸರು ಬ್ರೌನಿ.

ಅದರ ಬಣ್ಣಕ್ಕಾಗಿಯೆ ಅದರ ಹೆಸರು ಬ್ರೌನಿ. ಮನೆಯ ಮಗುವಿಗೂ ಅದಕ್ಕೂ ಎಲ್ಲಿಲ್ಲದ ಸ್ನೇಹ. ಇಬ್ಬರೂ ಕೂಡಿ ಆಡುವುದು ಒಟ್ಟಿಗೆ, ತಿನ್ನುವುದು ಒಟ್ಟಿಗೆ.

ಅವರಿಬ್ಬರನ್ನೂ ದೂರವಿಡಲು ತಾಯಿ ಅತಿಯಾಗಿ ಪ್ರಯತ್ನಿಸಿದ್ದಾಳೆ. ಉಹೂ, ಅದಕ್ಕೆ ಮಗು ಮಣಿಯದು. ಒಂದು ರೊಟ್ಟಿ ಇದ್ದರೆ ಎರಡು ಪಾಲು. ನಾಯಿ ಎಂಜಲು ಮುಟ್ಟಿ-ತಿಂದು ರೋಗ ಬರುತ್ತೆ ಎಂಬ ಆತಂಕ ತಾಯಿಗೆ. ಆದರೆ ಆ ತುಂಟ ಮಗು ಕೇಳಬೇಕಲ್ಲ, ಎಲ್ಲಕ್ಕೂ ಬೆನ್ನು ತಿರುವುತಿತ್ತು. ಸದಾ ಅಂಗಳದಲ್ಲಿ ಜಗಲಿಯಲ್ಲಿ ಅವರಿಬ್ಬರ ಆಟ-ಕೂಟ.

ತಾಯಿ ಸದಾ ಕೆಲಸಕ್ಕಾಗಿ ಹೊರಹೋಗುತ್ತಾಳೆ. ಹೊರ ಹೋದಾಗ ಅವರಿಬ್ಬರ ಮೋಲ್ವಿ

ಚಾರಣೆ ಲಲ್ಲುಗೆ ಸೇರಿದ್ದು. ಲಲ್ಲು ಸಹ ಆ ಮನೆಗೆ ತುಂಬಾ ಹಳಬಳೆ. ಅವಳಿಗೆ ಮಗುವಿನ ಮೇಲೆ ತುಂಬ ಅಕ್ಕರೆ, ಹಾಗೂ ಚ್ಯಾನಿಯ ಮೇಲೆ.

ಡಿಂಗ್ ಡಾಂಗ್! ಡಿಂಗ್ ಡಾಂಗ್!

ಮುಂಬಾಗಿಲ ಕರೆಗಂಟೆ ಕೂಗಿ ಕರೆ ನೀಡಿತು.

ಲಲ್ಲು ಕದ ತೆರೆಯಲು ಒಳ ಹೋದಳು. ಬಂದವ ಟಪ್ಪಾಲಿನವ. ಕೈಯಲ್ಲಿ ಕಾಗದಗಳ ಕಟ್ಟು. ಅವುಗಳಲ್ಲಿ ಒಂದೆರಡನ್ನು ವಿಂಗಡಿಸಿ ಲಲ್ಲು ಕೈಗೆ ನೀಡಿದ. ಅವಳು ಮುಂಬಾಗಿಲು ಮುಚ್ಚಿಕೊಂಡು ಒಳಬಂದೊಡನೆ ಮಗು ಕೇಳಿತು

'ಅಮ್ಮ ಬಂದಳಾ?'

'ಇಲ್ಲ ಮಗು! ಅಮ್ಮ ಬರುವುದು ಸಾಯಂಕಾಲ.'

ಸ್ವಲ್ಪಹೊತ್ತು ಉರುಳಿತು. ಲಲ್ಲೂ ಅಕ್ಕಿ ಆರಿಸಲು ಕುಳಿತಳು.

'ಅಮ್ಮ ಬಂದಳಾ ಲಲ್ಲೂ?'

ಇಷ್ಟು ಬೇಗ ಬರೋಲ್ಲ ಮಗೂ!'

ಬೌ್ರನಿ ನಾಯಿಯೊಂದಿಗೆ ಆಟವಾಡುತ್ತಿದ್ದ ಮಗು ಬಾಯಿಯಲ್ಲಿ ಬೆರಳಿಟ್ಟು ಚೀಪುತ್ತ ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ಪುನಃ ಕೇಳಿತು 'ಅಮ್ಮ ಬಂದಳಾ?'

'ಏಕೆ ಹಾಗೆ ಮೇಲಿಂದ ಮೇಲೆ ಕೇಳು ತ್ತಿದ್ದೀ?'

'ಏಕೆಂದರೆ ಅಮ್ಮ ಬೆರಳು ಚೀಪಬೇಡ, ಅಂದಿದ್ದು. ಅಮ್ಮ ಬರುವತನಕ ಚೀಪುವೆ. ಅನಂತರ ಇಲ್ಲ. ಅದಕ್ಕೇ ಕೇಳಿದ್ದು.'

'ನೀನು ಜಾಣಮರಿ' ಎಂದು ಮುದ್ದಿಸಿ ಒಳ ಹೋದಳು ಲಲ್ಲು.

ಹೊತ್ತು ಉರುಳಿತು. ಮಧ್ಯಾಹ್ನದ ಬಿಸಿಲು ಏರುತಿತ್ತು. ಲಲ್ಲು ಮಗುವಿಗೆ ಊಟ ತಂದು ಮೇಜಿನ ಮೇಲಿಟ್ಟು ಮಗುವಿಗೆ ಕೈ ತೊಳೆಸಲು ಹೋದರೆ ಕೋತಿಯೊಂದು ಬಂದು ಊಟದ ತಟ್ಟೆಯನ್ನೇ ತೆಗೆದುಕೊಂಡು ಹಾರಿತು. ಅದನ್ನು ಕಂಡದ್ದೇ ಬೌ್ರನಿ ಓಡಿ ಬಂದು ಕೋತಿಯನ್ನು ಬೆನ್ನಿನ ಮೇಲೆ ಕಚ್ಚಿ ಹಿಡಿಯಿತು. ಕೋತಿಯು ದೊಡ್ಡದೇ ನಾಯಿಯನ್ನು ಬಿಟ್ಟೀತೆ? ಅದು

ಪರಚಿ ಕಚ್ಚಿ ಕುಸ್ತಿಯನ್ನೇ ಹೂಡಿತು. ಎರಡಕ್ಕೂ ಮಾರಾಮಾರಿ ಯುದ್ಧ.

ನಾಯಿ ಬಿಡದು. ಕೋತಿ ಸೋಲದು.

ಲಲ್ಲು ಹೊರಬಂದು ನೋಡುತ್ತಾಳೆ. ಹೋರಾಟ ಭಯಾನಕ! ತಕ್ಷಣ ಬಾಗಿಲು ಮುಚ್ಚಿಕೊಂಡಳು. ಎರಡೂ ಗಂಟಲು ಹರಿಯುವಂತೆ ಚೀರಾಡುತ್ತಿವೆ. ಏನು ಮಾಡುವುದು? ಹೇಗೆ ಬಗೆ ಹರಿಸುವುದು ತಿಳಿಯದಾದಳು. ಮಗು ಭಯ ಭೀತಿಯಿಂದ ಜೋರಾಗಿ ಅಳಲಾರಂಭಿಸಿತು. ಕಿವಿ ಚಿಟ್ಟು ಹಿಡಿಸುವಂತಹ ಗದ್ದಲ. ನಾಯಿಗೂ ಚೆನ್ನಾದ ಪೆಟ್ಟಾಗಿದೆ. ಅದು ಏನಾದೀತೋ ಎಂಬ ಭಯ.

ಲಲ್ಲು ಮಗುವಿನೊಂದಿಗೆ ಕಿಟಕಿಯಿಂದ ನೋಡುತ್ತಲೇ ಇದ್ದಾಳೆ.

ಕೊನೆಗೂ ಕೋತಿ ಸತ್ತಿತು. ನಾಯಿಗೂ ತುಂಬ ಪೆಟ್ಟಾಗಿದ್ದುದರಿಂದ ನಿದುಸಿರು ಬಿಡುತ್ತಾ ಅಲ್ಲಿಯೇ ಬಿದ್ದುಕೊಂಡಿತು. ಮೈಯೆಲ್ಲಾ ರಕ್ತಮಯ. ಬಹಳ ಬಳಲಿ ಬಿಟ್ಟಿದೆ.

ಲಲ್ಲು ಹೊರಬಂದು 'ಬ್ರೌನೀ....ಬ್ರೌನೀ!' ಎಂದು ಕರೆದರೆ ಕಣ್ಣು ಬಿಟ್ಟು ನೋಡಲಾರದು

ಅವು. ಲಲ್ಲು ಒಂದು ಬಟ್ಟಲು ಹಾಲನ್ನು ತಂದಿಟ್ಟಳು. ಅದಕ್ಕೆ ಬಾಯಾರಿಕೆಯಾಗಿದ್ದರೂ ತಲೆಯೆತ್ತಿ ಕುಡಿಯಲು ಶಕ್ತಿಯೇ ಉಳಿದಿರಲಿಲ್ಲ. ಲಲ್ಲು ಚಮಚೆಯಿಂದ ಹಾಲು ಕುಡಿಸಿದಳು. ಅದು ಗುಟುಕಿಸಿದರೂ ಅರ್ಧ ಹಾಲು ಹೊರ ಚೆಲ್ಲಿತು.

ಮಗು ಅದರ ಭಯಾನಕ ಸ್ಥಿತಿಯನ್ನು ನೋಡಿ ಒಂದೇ ಸಮನೆ ಅಳುತ್ತಿದೆ. ಮಗುವಿನ ಅಳು ಕಿವಿಗೆ ಬಿದ್ದಿತೋ ಇಲ್ಲವೋ ನಾಯಿ ಕುಂಯ್‌ಕುಂಯ್ಯಿಯಿಸಾ ಎನ್ನುತ್ತ ಕಣ್ಣು ಬಿಟ್ಟು ನೋಡಿತು. ಆ ಮಗುವಿನ ಮೇಲಣ ಆಸೆ ನೋವಿನಲ್ಲೂ ನಲಿವು ಮೂಡಿಸಿತೇನೋ. ಅದು ಪುನಃ ಪುನಃ ಕಣ್ಬಿಟ್ಟು ನೋಡಿತು. ಲಲ್ಲು ತಡೆಹಾಕಿದರೂ ಕೇಳದೆ ಮಗು ಬ್ರೌನಿಯನ್ನು ತಬ್ಬಿತು. ಬ್ರೌನಿ ತಲೆಯನ್ನು ಮಗುವಿನ ಮೈಗೆ ಉಜ್ಜಿ ಕುಂಯ್ ಕುಂಯ್ ಎಂದು ಒಡಲ ಸಂಕಟವನ್ನು ಸೂಸಿತು.

ಅದನ್ನು ಅಪ್ಪಿ ಹಿಡಿದುದರಿಂದ ಮಗುವಿನ ಮೈಯ್ಯೂ ರಕ್ತಮಯ.

ಅದೇ ವೇಳೆಗೆ ತಾಯಿ ಬಂದಳು. ನೋಡಿದರೆ ಎಂತಹ ಭಯಾನಕ ದೃಶ್ಯ!

ಒಮ್ಮೆಲೇ ದಿಕ್ಕೆಟ್ಟಂತೆ 'ಅಯ್ಯೊ, ದೇವರೆ!' ಎಂದು ಚೀರಿದಳು.

ನಾಯಿ ಒಡತಿಯನ್ನೊಮ್ಮೆ ನೋಡಲಾರದೇ ನೋಡಿ ಪ್ರಾಣ ಬಿಟ್ಟಿತು.

ಒಡತಿ ಮಗುವನ್ನು ನಾಯಿಂದ ಬೇರ್ಪಡಿಸ ಬೇಕೆಂದರೆ ಅದು ಹಿಡಿತವನ್ನು ಸಡಿಲಗೊಳಿಸಿದ ರಷ್ಟೆ? ತಾಯಿ ಬಲಾತ್ಕಾರವಾಗಿ ಮಗುವನ್ನು ಎತ್ತಿಕೊಂಡು ಹೋಗಿ ಸ್ನಾನ ಮಾಡಿಸಿದಳು.

ಮಗು ಸ್ನಾನ ಮುಗಿಸಿ ಹೊರ ಬರುವಷ್ಟ ರಲ್ಲಿ ನಾಯಿ-ಕೋತಿಗಳ ಶವವನ್ನು ಹೊರಸಾಗಿಸ ಲಾಗಿತ್ತು. ಮಗು ನಾಯಿಗಾಗಿ ಹುಡುಕಿ 'ಬ್ರೌನಿ ಎಲ್ಲಮ್ಮ?' ಎಂದಿತು.

'ಅದು ದೇವರ ಹತ್ತಿರ ಹೋಯಿತು.'

ಆ ಮಾತು ಕೇಳುತ್ತಲೂ ಮಗು ಅಲ್ಲಿಂದ ದೇವರ ಮನೆಗೆ ಧಾವಿಸಿತು.

ಹಿಂದಿಲಿಂದ ನೋಡುತಿದ್ದ ತಾಯಿ ಮತ್ತು ಲಲ್ಲೂ ಕಣ್ಣುಗಳಲ್ಲಿ ನೀರು ಮೂಡಿತು.



# ಪುಷ್ಕರಣಿಯಲ್ಲಿ ಕಿನ್ನರಿ

ಗ್ರೀಕ್ ದೇಶದಲ್ಲಿ ಮರಿಯಾ ಎಂಬ ಬಡ ತಾಯಿ ಇದ್ದಳು.

ಅವಳಿಗೆ ಒಬ್ಬನೇ ಮಗ. ಅವನನ್ನು ಬಹಳ ಮುದ್ದಿನಿಂದ ಸಾಕಿದುದರಿಂದ ತುಂಬ ಸೋಮಾರಿಯಾಗಿ ಉಂಡಾಡಿ ಗುಂಡನಾಗಿ ಬೆಳೆದ. ಅವನು ಬಹಳ ಸುಂದರ ಹುಡುಗ. ಪ್ರಾಯ ಇರುವವರೆಗೆ ಆ ತಾಯಿ ಕೈತುಂಬಾ ದುಡಿಯುತ್ತಿದ್ದುದರಿಂದ ಅವನಿಗೆ ದುಡಿಯುವ ಶ್ರಮವಾಗಲೀ, ಕಷ್ಟದ ಅರಿವಾಗಲೀ ತಿಳಿಯಲಿಲ್ಲ. ಎಲ್ಲಾದರೂ ತಿರುಗಾಡಿ ಊಟದ ಸಮಯಕ್ಕೆ ಮನೆಗೆ ಮರಳುತ್ತಿದ್ದ.

ಒಮ್ಮೆ ಆ ತಾಯಿ ನೊಂದು ನುಡಿದಳು 'ಅಪ್ಪಾ! ಮಗನೇ! ಹೀಗೆ ನಾನೇ ಎಷ್ಟು ದಿನ ನಿನಗೆ ದುಡಿದು ಇಕ್ಕಬಲ್ಲೆ? ನೀನು ಇನ್ನು ಮುಂದೆ ಯಾವುದಾದರೂ ಸಂಪಾದನೆಯ ಮಾರ್ಗ ಕಂಡುಕೊ. ಸಂಪಾದನೆಯಿಲ್ಲದೆ ಜೀವನ ಹೇಗೆ ಮಾಡುತ್ತಿ?

ಈ ತಾಯಿ ನಿನ್ನ ಜೀವಮಾನದವರೆಗೂ ಬದುಕಿರು ತ್ತಾಳೆಯೇ? ಯೋಚಿಸಿನೋಡು!'

ಅವಳು ಸಂಕಟದಿಂದ ನುಡಿದ ಮಾತು ಹುಡುಗನ ಮನಸ್ಸನ್ನು ಮುಟ್ಟಿತು. ಅವನು ಏನು ಮಾಡಲಿ? ಹೇಗೆ ದುಡಿಯಲಿ? ಎಂದು ಯೋಚಿಸುತ್ತ ನಿಂತ.

'ಇಲ್ಲಿ ಕೇಳು, ಮಾರಿಷ್! ಇಲ್ಲಿಂದ ಇಪ್ಪತ್ತು ಮೈಲಿ ದೂರದಲ್ಲಿ ಮ್ಯಾಂಡರ್ಲಿ ನಗರದಲ್ಲಿ ನನ್ನ ಅಣ್ಣ ಡೇವಿಡ್ ಇದ್ದಾನೆ. ಅವನು ಒಳ್ಳೆಯ ಬಡಗಿ. ನೀನು ಅವನೊಂದಿಗೆ ಕೆಲಸಮಾಡಿ, ಕೆಲಸ ಕಲಿತುಕೊ. ಅನಂತರ ನೀನು ಇಲ್ಲಿಯೇ ಒಂದು ಅಂಗಡಿ ತೆರೆಯಬಹುದು.'

'ಆ ಕೆಲಸ ಕಲಿಯಲು ಎಷ್ಟು ಕಾಲ ಬೇಕಾಗಬಹುದು?'

'ಸುಮಾರು ಮೂರು-ನಾಲ್ಕು ತಿಂಗಳು.'

'ಹಾಗಿದ್ದರೆ ಹೋಗುವೆ.'

ತಾಯಿ ಸಂತಸದಿಂದ ಮಗನಿಗೆ ಬುತ್ತಿ ಕಟ್ಟಿ ಕೊಟ್ಟು 'ಹೋಗಿ ಬಾ ಮಗನೇ!' ಎಂದಳು.

ಮಾರಿಷ್ ಹೊರಟ. ಅವನು ದೂರದ ಹಾದಿಯನ್ನು ಎಂದೂ ನಡೆದವನಲ್ಲ. ಕತ್ತಲು ಕವಿಯುವುದರೊಳಗೆ ತಂಗಲು ಒಂದು ನೆಲೆಯನ್ನು ಕಂಡುಕೊಳ್ಳುವುದಕ್ಕಾಗಿ ಬಿರುಸಾಗಿಯೇ ನಡೆಯತೊಡಗಿದ. ಮುಖಮೈಗಳಲ್ಲಿ ಬೆವರು ಧಾರೆ ಧಾರೆಯಾಗಿ ಸುರಿಯಿತು. ಹಸಿವು ಬಾಯಾರಿಕೆಗಳ ಆಕರ ಬೇರೆ. ಹೊತ್ತು ಉರುಳಿದಂತೆ ಅವನು ಬಹಳ ಬಳಲಿದ.

ನಸು ದೂರದಲ್ಲೊಂದು ಪುಷ್ಕರಣಿ. ಅದರ ತುಂಬಾ ಥಳಥಳಿಸುವ ನೀರು. ಹುಡುಗ ಸಂತುಷ್ಟನಾಗಿ ಅದರ ಕಡೆ ನಡೆದ.

ಮಾರಿಷ್ ತೀರಕ್ಕೆ ಇಳಿದು ಕೈಕಾಲು ಮುಖ ತೊಳೆದುಕೊಂಡನಂತರ ನೀರು ಕುಡಿದ. ದಣಿವಾರಿಸಿಕೊಳ್ಳಲು ಕುಳಿತರೆ ನಾನು ಹೇಗೆ ಕೆಲಸ ಮಾಡುವೆನೋ ಕಷ್ಟದ ಕೆಲಸ ನನ್ನಿಂದಾದೀತೇ ಎಂಬ ಯೋಚನೆ ಬಂದು ಕಣ್ಣುಗಳಲ್ಲಿ ನೀರು ಹರಿಯಿತು. ಆ ಪುಷ್ಕರಣಿಯಲ್ಲಿದ್ದ ಕಿನ್ನರಿಗೆ ಹುಡುಗನ ಮೇಲೆ ಕರುಣೆಯುಂಟಾಗಿ ಹೊರ ಬಂದು ಕೇಳಿದಳು,

'ಮಾರಿಷ್ ಏಕೆ ಅಳುತ್ತಿದ್ದಿಯೆ?'

‘ನನಗೆ ದುಡಿಯುವ ಶ್ರಮ ತಿಳಿಯದು. ಹೇಗೆ ಕೆಲಸ ಮಾಡುವೆನೋ ಎಂದು ದುಃಖ ವಾಗಿದೆ.’

‘ನೀನು ಇದುವರೆಗೆ ಕೆಲಸ ಮಾಡಲಿಲ್ಲವೇ?’

‘ಇಲ್ಲ. ನನ್ನತಾಯಿ ಸುಖವಾಗಿ ಬೆಳೆಸಿದಳು.’

‘ಓ! ಹಾಗೋ! ನಿನಗೆ ಸಹಾಯ ಮಾಡುವೆ. ಇದೋ, ಈ ಕಲ್ಲನ್ನು ನಿನ್ನ ಜೇಬಿನಲ್ಲಿಟ್ಟುಕೊ. ನಿನ್ನ ಕೆಲಸ ಸುಗಮವಾಗಿ ನಡೆಯುತ್ತದೆ. ಆದರೆ, ಒಂದು ಶರತ್ತು. ನೀನು ಹಿಂದಿರುಗಿ ಹೋಗು ವಾಗ ಈ ಕಲ್ಲನ್ನು ನನಗೆ ಹಿಂದಿರುಗಿಸಬೇಕು ತಿಳಿಯಿತೇ?’.

‘ಆಗಲಿ.’

ಹುಡುಗ ಆನಂದದಿಂದ ವಂದನೆ ಸಲ್ಲಿಸಿ ಆ ಕಲ್ಲನ್ನು ತೆಗೆದುಕೊಂಡ. ಬಿಸಿಲ ಝಳಕ್ಕೆ ಮಿಂಚುವ ದುಂಡನೆಯ ಕಲ್ಲನ್ನು ಜೇಬಿನಲ್ಲಿಟ್ಟು ಕೊಂಡು ಮುಂದಿನ ಹಾದಿ ಹಿಡಿದು ಹೊರಟ.

ಅರೆ, ಹಾದಿ ನಡೆದುದೇ ತಿಳಿಯದಷ್ಟು ಸರಾಗ! ಗಾಳಿಯಲ್ಲಿ ತೇಲುತ್ತಿರುವಷ್ಟು ದೇಹ ಹಗುರ! ಮುಂದಿನ ದೂರದ ಹಾದಿಯನ್ನು ಅರೆ

ತಾಸಿನೊಳಗಾಗಿ ಕಳೆದು ಅವನು ನ್ಯಾಂಡರ್ಲಿ ಯನ್ನು ಮುಟ್ಟಿದ. ಮಾಮನೊಂದಿಗೆ ಕೂಡಿ ಕೆಲಸ ಕೈಕೊಂಡರೆ ಎಷ್ಟು ಸುಲಭ! ಕಾಲಾನು ಕಾಲದಿಂದಲೂ ಮಾಡಿ ತಿಳಿದಷ್ಟು ಸರಳ!

'ಅಹಃ! ಎಷ್ಟು ಚೆನ್ನಾಗಿ ಕೆಲಸ ಮಾಡು ತಿವಿ! ನಿನಗೆ ಹೇಳಿಕೊಡುವುದೇನಿದೆ? ನೀನು ಊರಿಗೆ ಹೋಗಿ ನಿನ್ನ ತಾಯಿ ಇದ್ದಲ್ಲೆ ಕೆಲಸ ಆರಂಭಿಸು. ವಿದ್ಯೆಯಲ್ಲಿ ಪ್ರವೀಣನಿದ್ದಿ. ಹೇಳಿ ಕೊಡುವ ಅಗತ್ಯವಿಲ್ಲ. ಅಲ್ಲಿ ನಿನ್ನ ತಾಯಿ ಒಬ್ಬಳೇ ಆದುದರಿಂದ ಬೇಸರ ಪಟ್ಟುಕೊಳ್ಳ ಬಹುದು. ಅಲ್ಲೇ ನೀನು ವೃತ್ತಿಯನ್ನು ಕೈಕೊಳ್ಳು.'

ಮಾರಿಷ್ ಸಂತುಷ್ಟನಾಗಿ ಮಾವನಿಂದ ಬೀಳ್ಕೊಂಡು ಊರಿಗೆ ಹೊರಟ. ಹಿಂದಿನಂತೆಯೇ ಹಾದಿ ಸುಲಭವಾಗಿ ಸಾಗಿತು. ಸ್ವಲ್ಪ ದೂರ ನಡೆದ ಮೇಲೆ ದಾರಿಯ ಬದಿಯಲ್ಲಿ ಅದೇ ಪುಷ್ಕ ರಣಿ. ಮಾರಿಷ್ ಸ್ವಲ್ಪಹೊತ್ತು ನಿಂತು ಯೋಚಿಸಿದ....ಕಿನ್ನರಿಯ ಕಲ್ಲನ್ನು ಹಿಂದಿರುಗಿಸಿ ದರೆ ತನಗೆ ವಿದ್ಯೆ ಹತ್ತದೆ ಇರಬಹುದು. ಏನು ಮಾಡಲಿ? ಎಂಬ ಪ್ರಶ್ನೆ ಎದ್ದಿತು ಮನದಲ್ಲಿ.

ಒಡನೆ ಮಾರಿಷ್ ಕಲ್ಲನ್ನು ಹಿಂದಿರುಗಿಸುವ ಯೋಚನೆಯನ್ನು ಬಿಟ್ಟು ತನ್ನ ಊರಿಗಭಿಮುಖ ವಾಗಿ ನಡೆದ. ಆದರೆ, ಆ ಕಿನ್ನರಿ ಸುಮ್ಮನಿದ್ದಾಳೆಯೇ? ದಾರಿಗಡ್ಡಗಟ್ಟಿ ಅಪ್ಪಣೆ ಮಾಡಿದಳು.

'ಏಯ್! ಮಾರಿಷ್! ನನ್ನ ಕಲ್ಲನ್ನು ಹಿಂದಿರುಗಿಸಿ ಹೋಗು!'

'ತಾಯಿ! ನಾನಲ್ಲಿ ಮೂರುದಿನವೂ ಕಲಿಯಲಿಲ್ಲ. ನೀನು ಕಲ್ಲನ್ನು ಹಿಂತೆಗೆದುಕೊಂಡರೆ ನನಗೆ ವಿದ್ಯೆ ಬಾರದೇ ಹೋಗಬಹುದು. ಅದಕ್ಕಾಗಿಯೇ ಹೆದರಿ ಹಿಂದಿರುಗಿಸದೆ ಬಂದೆ.'

'ಮಾತು ಅಂದರೆ ಮಾತು! ನೀನು ಈಗಲೇ ಹಿಂದಿರುಗಿಸು!'

ಮಾರಿಷ್ ವಿಧಿಯಿಲ್ಲದೆ ಕಲ್ಲನ್ನು ಹಿಂದಿರುಗಿಸಿ ಮುಂದೆ ನಡೆದರೆ ತನ್ನಲ್ಲಿ ಅಸ್ತಿತ್ವವೇ ಇಲ್ಲದಷ್ಟು ಬಲಹೀನತೆ. ಕಾಲುಗಳು ಆಗಲೇ ನೋಯುತೊಡಗಿವೆ. ಮುಂದಿನ ಪಯಣವನ್ನು ನೆನೆದರೆ ಒಡಲೆಲ್ಲಾ ಸಂಕಟ. ಬಡಗಿ ವೃತ್ತಿಯೂ ಆಗಲೇ ಮರೆತು ಹೋಗಿದೆ. ಮುಂದೇನು ಗತಿ? ತಾಯಿ ಕೇಳಿದರೆ ಹೇಳುವುದೇನು? ಅವಳು

ಮೂರು-ನಾಲ್ಕು ತಿಂಗಳು ಇದ್ದು ಕಲಿತುಕೊಂಡು ಬಾ ಎಂದು ಹೇಳಿದ್ದಳಲ್ಲವೇ? ಈ ಕಿನ್ನರಿಯ ಕಲ್ಲಿನಿಂದ ನಾನು ಕೆಲಸವನ್ನೂ ಕಲಿಯದೆ ಹೋದೆ ನಲ್ಲಾ' ಎಂದು ಪೇಚಾಡಿದ.

ಊರಿನಲ್ಲಿ ಬಡಗಿ ಕೆಲಸ ಆರಂಭಿಸಿದರೆ ಉಳಿ-ಗರಗಸ ಹಿಡಿಯಲಾದರೂ ಬರುತ್ತದೆಯೇ? ಊಹೂಂ! ಇಲ್ಲವೇ ಇಲ್ಲ. ತಾಯಿ ಸಿಟ್ಟಿನಿಂದ ಹೇಳಿದಳು 'ನೀನು ಕಿನ್ನರಿ ಕೊಟ್ಟ ಕಲ್ಲನ್ನು ಕೆಲವಾರು ತಿಂಗಳು ನಿನ್ನಲ್ಲೇ ಇಟ್ಟುಕೊಂಡಿದ್ದು ಕೆಲಸ ಕಲಿಯಬೇಕಿತ್ತು. ವಿದ್ಯೆ ನಿನ್ನ ಕರಗತವಾಗುವುದರೊಳಗೇ ಅವಸರಿಸಿ ಹಿಂದಿರುಗಿ ಬಂದದ್ದು ತಪ್ಪು! ಈಗ ಮತ್ತೊಮ್ಮೆ ಹೋಗಿ 'ತಾಯಿ! ತಪ್ಪಾಯ್ತು. ನನ್ನ ಮುಂದಿನ ಜೀವನಕ್ಕೆ ದಾರಿ ತೋರು! ಎಂದು ಕಿನ್ನರಿಯನ್ನು ಬೇಡಿಕೊ-ಕೈ ಮುಗಿದು ಕೇಳಿಕೋ!'

ಮಾರಿಷ್ ಆಗ, ಅದು ಹೊರತು ತನಗೆ ಬೇರೆ ದಾರಿಯಿಲ್ಲ ಎಂಬುದನ್ನು ತಿಳಿದರೂ ಕಿನ್ನರಿ ಈ ಸಲಿ ಮತ್ತೆ ದರ್ಶನ ಕೊಡುವಳೋ....ಇಲ್ಲವೋ, ಅವರ ಮಾತು ಮೀರಿ ಅಪಚಾರ ಮಾಡಿರುವೆ ನಲ್ಲಾ ಎಂದು ಅತ್ತು ಗೋಳಾಡಿದ.

'ಏನಾದರಾಗಲಿ, ಅವಳನ್ನೇ ಬೇಡಿಕೊ. ಅವಳು ದರ್ಶನ ಕೊಡುವವರೆಗೆ ಕುಳಿತಲ್ಲಿಂದ ಏಳಲೇ ಬೇಡ. ನನ್ನದು ತಪ್ಪಾಯಿತು ಎಂದು ಒಪ್ಪಿಕೊಂಡರೆ ಆಯಿತಲ್ಲ.'

ಆಗ ತಾಯಿಯ ಮಾತಿಗೆ ಒಪ್ಪಿ ಮಾರಿಷ್ಟ ಹೊರಟ. ನಡೆದೂ ನಡೆದೂ ಕಾಲುಗಳಲ್ಲಿ ಬೊಬ್ಬೆ ಗಳು ಎದ್ದುವು. ನಡೆಯುವ ಕಷ್ಟ ಹೇಳತೀರದು. ನೆತ್ತಿಯ ಮೇಲೆ ಉರಿಯುವ ರಣರಣ ಬಿಸಿಲು. ಮೇಲಾಗಿ, ಹಸಿವು ಬಾಯಾರಿಕೆಗಳು. ಅಂತೂ, ಬಹಳ ಕಷ್ಟದಿಂದ ಪುಷ್ಕರಣಿಯ ತೀರವನ್ನು ಮುಟ್ಟಿದ. ಕೈಕಾಲು ಮುಖ ತೊಳೆದು, ಹೊಟ್ಟೆ ತುಂಬಾ ನೀರು ಕುಡಿದು ಗೋಳಾಡಿ ಅಳುತ್ತ ತಾಯೆ! ಕಿನ್ನರಿ! ನನ್ನನ್ನು ಕ್ಷಮಿಸು. ಖಂಡಿತ ಕ್ಷಮಿಸು....ನನಗೆ ದರ್ಶನ ನೀಡುವಷ್ಟು ಕೃಪೆ ದೋರು!' ಎಂದು ಗೋಗರೆದು ಬೇಡಿಕೊಂಡ.

ಕಿನ್ನರಿಗೆ ಹುಡುಗ ಮಾತಿಗೆ ತಪ್ಪಿದನೆಂದು ಸಿಟ್ಟು. ದರ್ಶನ ಕೊಡಲು ಮನಸ್ಸೇ ಇಲ್ಲ....ಆದರೆ, ಆ ಹುಡುಗ ಬೋರಾಡಿ ಅಳುತ್ತಲೇ ಇದ್ದ. ಅವನ ದುಃಖ ಸಂಕಟಗಳು ಕಿನ್ನರಿಯ ಮನವನ್ನು ಕರ ಗಿಸಿದುವು. ಅವಳು ದರ್ಶನ ಕೊಟ್ಟು 'ನೀನು

ಮಾತಿಗೆ ತಪ್ಪಿದವ ನಾಚಿಕೆಯಿಲ್ಲದೆ ಮುಖ ತೋರಿಸುತ್ತಿದ್ದೀಯೆ!' ಎಂದು ಗದರಿಕೊಂಡಳು.

ಹುಡುಗ ಎರಡೂ ಕೈಗಳನ್ನು ಮುಗಿದು ಕೊಂಡು ತನ್ನ ತಪ್ಪುಗಳನ್ನು ಮನ್ನಿಸಬೇಕೆಂದು ಬೇಡಿಕೊಂಡ. ಕಣ್ಣುಗಳಲ್ಲಿ ಕಂಬನಿ ಸುರಿದು ಹೋಯಿತು.

'ಇನ್ನು ಮುಂದೆ ಮಾತಿಗೆ ತಪ್ಪುವುದಿಲ್ಲ ವಷ್ಟೆ?'

'ಖಂಡಿತ ಇಲ್ಲ ತಾಯಿ. ನಾನು ಇದರಿಂದ ಪಾಠ ಕಲಿತಿರುವೆ. ದಯಮಾಡಿ ಕ್ಷಮಿಸು. ತಾಯಿ ಕ್ಷಮಿಸು!'

'ನಿನಗೆ ಇನ್ನು ಕಲ್ಲೂ ಬೇಡ; ನೀನೂ ಬೇಡ. ಶ್ರದ್ಧೆಯಿಂದ ಕೆಲಸ ಹಿಡಿ. ವಿದ್ಯೆ ನಿನ್ನ ಕರಗತ ವಾಗುತ್ತದೆ. ಆದರೆ, ಒಂದು ವಿಷಯ ನೆನಪಿನಲ್ಲಿ ಇಟ್ಟುಕೊ. ನೀನು ಎಂದೂ, ಯಾವತ್ತೂ ಕೊಟ್ಟ ಮಾತಿಗೆ ತಪ್ಪಬಾರದು.'

'ಇಲ್ಲ, ತಾಯಿ!'

'ಸುಳ್ಳು-ಮೋಸಗಳು ನಿನ್ನ ಬಳಿ ಸುಳಿಯ ಬಾರದು'

‘ಆಗಲಿ ತಾಯೀ!’

‘ಹೋಗು. ನಿನ್ನ ಸತ್ಯ-ನಿಷ್ಠೆಗಳು ನಿನ್ನನ್ನು ಕಾಪಾಡುತ್ತವೆ.’

ಹುಡುಗ ಕೈಮುಗಿದುಕೊಂಡಿದ್ದಂತೆಯೇ ಕಿನ್ನರಿ ಅದೃಶ್ಯಳಾದಳು. ಮೂರಿಷ್ ಆನಂದದಿಂದ ಊರಿಗೆ ಹಿಂತಿರುಗಿದ.... ಕಿನ್ನರಿಯ ಉಪದೇಶದಂತೆ ಒಳ್ಳೆಯ ನಡತೆಯಿಂದ ದುಡಿದು ಧನಿಕನಾಗಿ ಸುಖ ಜೀವನ ನಡೆಸಿದ.

ಬಡತಾಯಿ-ಮುರಿಯೂ ನಿಜಕ್ಕೂ ಸಂತುಷ್ಟಳಾದಳು.



## ಓತೀರೇ ಖ್ಯಾತೀರೇ!

ಅದೊಂದು ಕೊಬ್ಬಿದ ಓತಿಕ್ಯಾತ!

ಅದಕ್ಕೆ ಯಾವೊತ್ತೂ ಜಂಭ ನೆತ್ತಿಯ ವರೆಗೂ ಏರಿರುತ್ತದೆ. ನಡೆಯುವುದರಲ್ಲಿ ಠೀವಿ; ಮಾತಿನಲ್ಲಿ ಠೀವಿ; ವ್ಯವಹಾರದಲ್ಲೂ ಠೀವಿ.

ಹೆಂಡತಿ ಮುದಿಯಾದಳೆಂದು ಒಂದು ಹೊಸ ಹೆಣ್ಣನ್ನು ತಂದು ಮನೆ ತುಂಬಿಸಿ ಕೊಂಡಿತು. ಮುದಿ ಹೆಂಡತಿ ಏನೂ ಹೇಳದೆ ಸುಮ್ಮನಾಯಿತು. ವಿರುದ್ಧವಾಗಿ ಮಾತಾಡಿದರೆ ತನ್ನನ್ನು ಮುಗಿಸಿ ಬಿಡುವನೆಂಬುದು ಗೊತ್ತು! ಹಿಂದಿನಿಂದ ಬೈದುಕೊಂಡರೂ ಎದುರುಗಡೆ ನಯ ವಾಗಿಯೇ ವರ್ತಿಸುತಿತ್ತು, ಮುದಿ ಹೆಂಡತಿ.

ಓತೀಕ್ಯಾತ ಹಳೆಯ ಹೆಣ್ಣನ್ನಾಗಲೀ ಹೊಸ ಹೆಣ್ಣನ್ನಾಗಲೀ ಹೇಳಿ-ಕೇಳಿ ಮದುವೆಯಾದವನಲ್ಲ. ಬಾ ಎಂದಾಗ ಯಾವ ಹೆಣ್ಣಾದರೂ ಹಿಂದೆ ಬರಲೇ

ಬೇಕು! ಯಾರೂ 'ಉಹೂ' ಎನ್ನುವಂತಿಲ್ಲ. ಅಷ್ಟು ಕಟ್ಟುನಿಟ್ಟು.

ಅಂದು ಓತಿಕ್ಯಾತ ಇಬ್ಬರು ಹೆಂಡಿರನ್ನೂ ಕರೆದುಕೊಂಡು ವಿಹಾರಕ್ಕೆ ಹೊರಟ. ಆ ಹಸಿರು ಹೊಲದಲ್ಲಿ ಮಿಡತೆಗಳ ದಂಡು ಇಳಿದಿತ್ತು. ಆದರೆ ಅವು ಬಹಳ ಚುರುಕು, ಕಣ್ಣಿಗೆ ಬಿದ್ದುವೇ ಹೊರತು ಬಾಯಿಗೆ ಸಿಕ್ಕಲಿಲ್ಲ. ಮೂವರೂ ಅಲ್ಲಲ್ಲೇ ಸುತ್ತಾಡಿ ಮನೆಗೆ ಮರಳಿದುವು.

ಮುದಿ ಹೆಂಡತಿ ಮನೆಗೆಲಸ ಮಾಡುತಿದ್ದರೆ ಕಿರಿ ಹೆಂಡತಿ ಮಜವೇ ಮಜ. ಅದಕ್ಕೆ ಕುಳಿತು ಉಣ್ಣುವುದೇ ಹೊರತು ಬೇರೊಂದು ತಿಳಿಯದು. ಮುದಿ ಹೆಂಡತಿ ಮನೆಯ ಪರಿಸರದಲ್ಲಿಯೇ ನಾಲ್ಕಾರು ಜಿರಳೆಗಳನ್ನು ಹಿಡಿದು ತಂದು ಮಸಾಲೆ ಹಾಕಿ ಸಾರು ಮಾಡಿದ್ದಾಳೆ. ಜೊತೆಗೆ ಪಾಯಸ ಬೇರೆ.

ಜಿರಲೆ ಸಾರಿನೊಂದಿಗೆ ಪಾಯಸ ಎಂತಹ ರುಚಿ.

ಮುದಿ ಹೆಂಡತಿ ಮೇಜಿನ ಮೇಲೆ ತಟ್ಟೆ ಯಿಡುತ್ತ ಕಿರಿ ಹೆಂಡತಿಗೆ ಹೇಳಿತು 'ಹೋಗೇ ತಂಗೀ! ನಿನ್ನ ಗಂಡನನ್ನು ಊಟಕ್ಕೆ ಕರೆದು ಬಾ.'

ಕಿರೀ ಹೆಂಡತಿ ಗಂಡನನ್ನು ಕರೆಯಲು ಹೊರಟಿತು. ಗಲ್ ಗಲ್ ಎನುವಂತೆ ಕಾಲನ್ನು ಕುಟ್ಟಿ ಕುಟ್ಟಿ ನಡೆಯುತ್ತ ಹೋಗಿ ಗಂಡನ ಬಳಿ ನಿಂತು ಅರೆಳುಗಣ್ಣಿನಿಂದ ನೋಡುತ್ತ 'ಓತೀ ಕ್ಯಾತೀ! ಊಟಕ್ಕೆ ಬಾ!' ಎಂದಿತು.

ಆಗ ಓತೀಕ್ಯಾತನಿಗೆ ಹುಟ್ಟಿದ ಸಿಟ್ಟು ಅಷ್ಟಿಷ್ಟಲ್ಲ! ಸೆಡೆತು ಅಲ್ಲೇ ಕುಳಿತುಕೊಂಡಿತು. ತಿರುಗಿಯೂ ನೋಡಲಿಲ್ಲ.

ಮುದಿ ಹೆಂಡತಿ ಎಷ್ಟು ಕಾದರೂ ಗಂಡ ಬರಲಿಲ್ಲ. ಕಿರಿ ಹೆಂಡತಿಯು ಕರೆಯಲ್ಲಿ ಏನೋ ಅಚಾತುರ್ಯವಾಗಿದೆ ಎಂಬುದು ತಿಳಿದು ಹೋಯಿತು. ಕೂಡಲೇ ತಾನೇ ಊಟಕ್ಕೆ ಕರೆಯಲು ಹೋಯಿತು. ಓತೀಕ್ಯಾತರಾಯನಿಗೆ ಇನ್ನೂ ಸಿಟ್ಟು ಇಳಿದೇ ಇರಲಿಲ್ಲ. ತೀರಾ ಗಡಸಿನಿಂದಲೇ ಕುಳಿತಿತ್ತು. ಕಣ್ಣುಗಳು ಗಗನವನ್ನು ನಿಟ್ಟಿಸುತಿದ್ದುವೇ ಹೊರತು ಭೂಮಿಯನ್ನಲ್ಲ. ಮುದಿ ಹೆಂಡತಿ ತುಂಬ ವಿನಯದಿಂದ 'ಓತೀರೇ! ಖ್ಯಾತೀರೇ! ಊಟಕ್ಕೆ ಬನ್ನಿರಿ!' ಎಂದು ಮೆಲ್ಲನೆ ಕರೆಯಿತು.

ಆಗ ಓತೀಕ್ಯಾತ ಸಂತುಷ್ಟನಾಗಿ ಮುದಿ ಹೆಂಡತಿಯೊಂದಿಗೆ ಊಟ ಮಾಡಿತು. ಆಚೆ ಕಡೆ ನಿಂತಿದ್ದ ಕಿರಿಯ ಹೆಂಡತಿಯ ಮುಖ ನೋಡ ಬೇಕು! ಕರ್ರಗೆ ಟಾರು ಬಳಿದಷ್ಟು ಕಪ್ಪು!

ಮುದಿ ಹೆಂಡತಿಯಾದರೋ ಮುಸಿ ಮುಸಿ ನಗುತಿದ್ದಾಳೆ!



# ದುಷ್ಟ ಸಂಹಾರ

ಮಳೆ. ಮಳೆ. ಮಳೆ. ಎಂತಹ ಜಡಿ ಮಳೆ! ಜೋರ್ ಜೋರೆಂದು ಸುರಿಯುತ್ತಲೇ ಇತ್ತು ಸ್ವಲ್ಪವೂ ಎಡೆಬಿಡದೆ.

ನೀರೊಲೆಯ ಬಳಿ ಮೈಮುದುಡಿ ಮಲಗಿದ್ದ ಟಿಡ್ಡಿ ನಾಯಿ ಹೊರ ಹೋಗಲೇ ಇಲ್ಲ.

'ಮಿಯಾವ್! ಮಿಯಾವ್!'

ಜಾಲಿ ಬೆಕ್ಕು ಕೂಗಿ ಹೇಳಿತು 'ಟಿಡ್ಡಿ! ಇದೇ ನಿದು? ಏಕಿಷ್ಟು ಸೋಮಾರಿತನ? ಏಳದೆ ಬಿದ್ದು ಕೊಂಡಿದ್ದೀಯೆ!'

'ಈ ಮಳೆಯಲ್ಲಿ ಎದ್ದು ಮಾಡುವುದೇನು?'

'ಅಯ್ಯೊ, ಮರುಳೆ! ನಿನಗೊಂದು ವಿಶೇಷ ಸುದ್ದಿಯಿದೆ! ಎದ್ದೇಳು!'

ಆ ಮಾತು ಕೇಳಿ ದಡಕ್ಕನೆ ಎದ್ದು ನಿಂತ ನಾಯಿ ಕೇಳಿತು 'ಏನು ವಿಶೇಷ?'

'ಕೆರೆ ತುಂಬಿ ಕೋಡಿ ಹರಿದಿದೆ. ಅದರ ಮೀನೆಲ್ಲಾ ಅಂಗಣದಲ್ಲಿ ಒದ್ದಾಡುತ್ತಿವೆ.'

'ನಿಜವಾಗಿ?'

'ಹೌದು! ಬೇಗ ಬಾ!'

'ಮಳೆ ಬಿಟ್ಟಿಲ್ಲವಲ್ಲಾ!'

'ಛಿಃ! ಅದೇನು ಮಾಡುತ್ತೆ? ಈಗ ಎಷ್ಟೋ ಕಡಿಮೆಯಾಗಿದೆ!'

ಎರಡೂ ಹೊರಗೋಡಿದುವು. ದೂರ ಬಯಲಲ್ಲೊಂದು ಕೆರೆ. ಅದು ತುಂಬಿ ಕೋಡಿ ಹರಿದಾಗ ಅದರೊಂದಿಗೆ ಹೊರಬಂದ ಮೀನು ಗಳು ಕೆಲವು ಸತ್ತು ಬಿದ್ದಿವೆ. ಕೆಲವು ಒದ್ದಾಡು ತ್ತಿವೆ! ನೀರು ಹರಿದು ಹೋಗಿ ಅವುಗಳಿಗೆ ಆಶ್ರಯ ತಪ್ಪಿತ್ತು.

ಟಿಡ್ಡಿ-ಜಾಲಿಗಳು ಮೀನುಗಳನ್ನು ಹೆಕ್ಕಿ ರಾಶಿ ಹಾಕಿದುವು.

ಅದೃಷ್ಟಕ್ಕೆ ಅಲ್ಲೊಂದು ಮುರುಕಲು ಬುಟ್ಟಿ ಯೂ ಇತ್ತು. ಎಲ್ಲವನ್ನೂ ಅದರಲ್ಲಿ ತುಂಬಿ ಮನೆಗೆ ಎಳೆ ತಂದುವು. ನೀರೊಲೆಯಲ್ಲಿ ಬೆಂಕಿ ಉರಿಯುತಿತ್ತು. ಕೆಂಡ ಹಿರಿದು ಗರಿಗರಿ ಬೇಯಿಸಿ ಈಚೆ ತೆಗೆದರೆ ಎಂಥ ಚೆನ್ನಾದ ವಾಸನೆ! ಎರಡರ ಬಾಯಲ್ಲೂ ನೀರೂರಿತು. ತಿನ್ನೋಣವೆಂದರೆ ಅವು ಬೇಗನೆ ಆರಬೇಕಲ್ಲ?

ಎರಡೂ ಬುಟ್ಟಿಯನ್ನು ಅಳ್ಳಾಡಿಸಿ-ಅಳ್ಳಾಡಿಸಿ ಬೇಗನೆ ಆರಿಸಲು ಪ್ರಯತ್ನಿಸಿದುವು. ಅಂತೂ, ಕೊನೆಗೊಮ್ಮೆ ಅವು ಆರಿ ತಣ್ಣಗಾದುವು. ಎರಡೂ ಕುಳಿತು ಕರುಂ ಕರುಂ ಅಗಿದು ನಾಲ್ಕಾರು ಮೀನನ್ನು ತಿಂದುವು. ಹೊಟ್ಟೆ ತುಂಬಿತು. ಉಳಿದ ನಾಲ್ಕಾರು ಮೀನನ್ನು ನಾಳೆಗೆಂದು ಹಾಗೇ ಇಟ್ಟು ಮಲಗಿದರೆ ರಾತ್ರಿಯೆಲ್ಲಾ ಮೀನಿನ ಕನಸುಗಳೇ!

ಜಾಲಿ ಮರುದಿನವೂ ಹೋಗಿ ಕೆರೆಯ ಏರಿಯ ಮೇಲೆ ನೋಡಿದರೆ ಮತ್ತೆ ಬೇಕಾದಷ್ಟು ಮೀನುಗಳು! ಕೂಡಲೇ ದೌಡಾಯಿಸಿ ಓಡಿ ಬಂತು ಮನೆಗೆ.

'ಟಿಡ್ಡಿ! ಟಿಡ್ಡಿ!' ಅಲ್ಲಿಂದಲೇ ಕಿರಿಚಿತು ಜಾಲಿ.... ಮಿಯಾವ್ ಮಿಯಾವ್!

'ಏನು ಜಾಲಿ!'

'ಮತ್ತೆ ಮೀನುಗಳು! ಬೇಗ ಬಾ, ಹೋಗಿ ತರೋಣ! ಈ ಸಲಿ ಈ ಬುಟ್ಟಿಯನ್ನೇ ಒಯ್ಯಬೇಕು. ಅಲ್ಲಿ ಬೇರೆ ಏನೂ ಇಲ್ಲ.'

'ಇದನ್ನು ಒಯ್ದರೆ ಮೀನುಗಳನ್ನೇನು ಮಾಡೋಣ?'

'ಇಲ್ಲೇ ಒಲೆಯ ಬಳಿ ಸುರಿದು ಸುರಿದ ರಾಯಿತು.'

ಒಡನೆ ಮೀನುಗಳನ್ನು ಒಲೆಯ ಬಳಿ ಸುರಿದು ಎರಡೂ ಪ್ರಾಣಿಗಳು ಕೆರೆಯಂಚಿಗೆ ಓಡು ತ್ತಲೇ ಚಕ ಚಕ ಹೋದುವು. ಅಲ್ಲಿ, ಇಲ್ಲಿ, ಎಲ್ಲಿ ನೋಡಿದರೂ ಮೀನುಗಳೇ! ಎಲ್ಲವನ್ನೂ ಹೆಕ್ಕಿ ಬುಟ್ಟಿಗೆ ತುಂಬಿ ಕೊಂಡು ಎಳೆದು ತಂದರೆ ಮೊದ ಲಿನ ಸುಟ್ಟ ಮೀನುಗಳು ಮಂಗಳ ಮಾಯ!

ಅರೆ! ಏನಾದುವು? ಬೌ ಬೌ ಬೊಗಳಿತು ಟೆಡ್ಡಿ ನಾಯಿ.

'ಅಯ್ಯೋ, ಬಹಳ ರುಚಿಯಾದ ಮೀನು ಗಳು! ಯಾರು ಕದ್ದರೋ ಏನೋ!'

'ಹೇಗಾದರೂ ಕಳ್ಳರನ್ನು ಹಿಡಿಯಲೇ ಬೇಕು!' ಟೆಡ್ಡಿ ಚೀರಿತು, ಬೌವೌವ್ವೂ.

'ಸಧ್ಯ ಹಸಿವು ತೀರಿಸಬೇಕು. ಕೆಂಡ ಹಿರಿದು ಮೀನುಗಳನ್ನು ಸುಡು ಟೆಡ್ಡಿ! ಮಿಯಾವ್! ಮಿಯಾವ್!'

ಆ ಕೂಡಲೇ ಉದ್ದನೆಯ ಸೌದೆಯಿಂದ ಕೆಂಡ ಹಿರಿದು ಮೀನುಗಳನ್ನು ಹರಡಿ ಕರಿಮುರಿ ಸುಟ್ಟು

ತೆಗೆದರೂ ಮೀನುಗಳ್ವರ ವಿಚಾರ ಮನಸ್ಸಿನಿಂದ ಮರೆಯಾಗಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಮೀನುಗಳು ತಣ್ಣಗಾದುವು. ಬೆಕ್ಕು ನಾಯಿಗಳು ಹಬ್ಬದೂಟ ಮುಗಿಸಿದುವು. ಉಳಿದ ಮೀನುಗಳನ್ನು ಯಾರಾದರೂ ಕದ್ದಾರೆಂಬ ಭಯದಿಂದ ಕಾವಲಿರುವ ಯೋಚನೆ ಮಾಡಿ ಒಂದು ಹೊರಹೋದರೆ ಒಂದು ಅಲ್ಲಿ ಕಾವಲಿರುತ್ತಿತ್ತು.

ಮರುದಿನವೂ ಜಾಲಿ ಕೆರೆದಂಡೆಗೆ ಹೋಗಿ ನೋಡಿದರೆ ಪುನಃ ಮೀನುಗಳು ದಡದ ಮೇಲೆ ಮಿಲಿ ಮಿಲಿ ಒದ್ದಾಡುತ್ತಿವೆ! ಜಾಲಿ ಸಂತೋಷದಿಂದ ಓಡೋಡಿ ಬಂದು ಟೆಡ್ಡಿಗೆ ವರದಿ ಮಾಡಿತು.

'ಈಗ ಏನು ಮಾಡೋಣ? ನಾವಿಬ್ಬರೂ ಹೋದರೆ ಈ ಮೀನಿನ ಗತಿ?'

'ಬೇಗ ಬಂದರಾಯಿತು.'

ಎರಡೂ ಪ್ರಾಣಿಗಳು ಮೀನನ್ನು ಒಲೆಯ ಬಳಿ ಮುಚ್ಚಿಟ್ಟು ಓಡುತ್ತಲೇ ಹೋದುವು ಕೆರೆಯ ಬಳಿಗೆ. ಅಲ್ಲಿ ಸ್ವಲ್ಪವೂ ಸಾವಕಾಶಮಾಡದೆ ಮೀನುಗಳನ್ನು ತುಂಬಿಕೊಂಡು ಓಡಿ ಬಂದರೆ ಒಂದು ದೊಡ್ಡ ಹೆಗ್ಗಣ ಮೀನುಗಳನ್ನು ಆಗಲೇ ತನ್ನ ಬಿಲಕ್ಕೆ ಅರ್ಧ ಸಾಗಿಸಿದೆ! ಇನ್ನೊಂದನ್ನು

ಸಾಗಿಸುತ್ತಿರುವಾಗಲೇ ಕಂಡ ಟಿಡ್ಡಿ ಜಾಲಿಗಳು ಅದರಮೇಲೆ ನುಗ್ಗಿದುವು!

ಅದು ದೊಡ್ಡ ಬಲಿಷ್ಠ ಹೆಗ್ಗಣ. ಇವು ಎರಡಾದರೂ ಹೆದರದೆ ಹೋರಾಟ ನಡೆಸಿತು!

ಬೆಕ್ಕಿಗೆ ಪ್ರಾಣಭಯ. ಅದರೊಂದಿಗೆ ಹೋರಾಡಲು ಹಿಂಜರಿಕೆ. ಆದರೆ ಟಿಡ್ಡಿ ಬಿಟ್ಟಾನೆಯೇ? ಅದನ್ನು ಕಚ್ಚಿ ಹಿಡಿದು ನೆಲದ ಮೇಲೆ ಎಳೆದಾಡಿ-ಕಿತ್ತಾಡಿ ಸಾಯಿಸುತ್ತಿರುವಾಗ ಜಾಲಿ ಸ್ವಲ್ಪಧೈರ್ಯದಿಂದ ನುಗ್ಗಿ ಪರಚಿತು. ಗುರ್ ಗುರ್ ಎಂದು ಕಿರುಚಿ ಹೆದರಿಸುತ್ತಲೇ ಹೋರಾಡುತ್ತಿದೆ ಹೆಗ್ಗಣ. ಆದರೂ ಬಿಡದೆ, ಎರಡೂ ಸೇರಿ ಕಚ್ಚಿ ಕಚ್ಚಿ ಮೈಯನ್ನು ಚೂರು ಮಾಡಿ ಸಾಯಿಸಿದುವು.

ಆಗ ಟಿಡ್ಡಿ ಮತ್ತು ಜಾಲಿಗಳಿಗೆ ಆದ ಸಂತೋಷ ಅಷ್ಟಿಷ್ಟಲ್ಲ.

ಜಾಲಿ ಹೇಳಿತು 'ಅದರ ಬಿಲ ಅಗೆದರೆ ನಮ್ಮ ಮೀನು ಸಿಗುತ್ತೆ!.

'ಸರಿ, ಅಗೆಯೋಣ!'

ಎರಡೂ ಕೂಡಿ ಅದರ ಬಿಲವನ್ನು ಕೆರೆದು ಅಗೆದರೆ ಮೀನುಗಳು ಮಾತ್ರವಲ್ಲ; ಇನ್ನೊಂದು

ಹೆಗ್ಗಣವೂ ಇದೆ! ನಾರ್ಣೆನಾ! ಅದು ಸುಮ್ಮ ನಿದ್ದೀತೇ? ಗುರ್‌ರ್‌ರ್‌ರ್ ಎಂದು ಹೊರ ನುಗ್ಗಿತು. ತೆರೆದ ಬಾಯಿ, ಚೂಪು ಹಲ್ಲುಗಳು, ಉದ್ದಮೀಸೆಯ ಉಗ್ರರೂಪವನ್ನು ನೋಡಿ ದಾಗಲೇ ಜಾಲಿಗೆ ಮೈಯೆಲ್ಲಾ ನಡುಕ! ಟಿಡ್ಡಿಗೆ ಖುಷಿಯೋ ಖುಷಿ! ಅದನ್ನು ಅಡ್ಡಗಟ್ಟಿ ಹಿಡಿ ಯಿತು. ಜಾಲಿಗೆ ಮುಂದೆ ನಿಲ್ಲಲು ಧೈರ್ಯ ವಿಲ್ಲವಾದರೂ ಹಿಂದಿನಿಂದ ಹಿಂಗಾಲು ಬಾಲ ಗಳನ್ನು ಹಿಡಿದು ಕಚ್ಚಿ ಪೌರುಷ ತೋರಿಸಿತು. ಹೆಗ್ಗಣ ಸುಲಭಕ್ಕೆ ಸೋಲದು. ಗುರ್ ಗುರ್ ಗುರ್ ಹೋರಾಟ ನಡೆಸಿತು. ಟಿಡ್ಡಿಗೀಗ ಸಿಟ್ಟು ನೆತ್ತಿಗೇರಿತು. ಕಚ್ಚಿ ಕಚ್ಚಿ ಮೈಯನ್ನೆಲ್ಲಾ ಚೂರು ಚೂರು ಮಾಡಿ ಸಾಯಿಸಿತು. ಹೊಟ್ಟೆ ಕರಳು ಹರಿದರೆ ಒಳಗೆಲ್ಲಾ ಮೀನುಗಳೇ!

ಆ ಕೂಡಲೇ ಜಾಲಿ ಅದರ ಬಿಲದಲ್ಲಿದ್ದ ಮೀನುಗಳನ್ನೆಲ್ಲಾ ಹೆಕ್ಕಿ ತಂದಿತು.

ಆಗ ಅವುಗಳಿಗಾದ ಆನಂದ ಅಷ್ಟಿಷ್ಟಲ್ಲ. ಆದರೇನು? ಬಹಳಷ್ಟು ಮೀನುಗಳನ್ನು ಮುಗಿ ಸಿವೆ. ಟಿಡ್ಡಿ ಹೆಗ್ಗಣಗಳ ಹೆಣಗಳನ್ನು ದೂರ ಒಗೆದು 'ಜಾಲಿ! ಮೀನುಗಳನ್ನು ತಾ! ಎಣಿಸು.

ನನಗೆ ಒಂದೆರಡು ಹೆಚ್ಚಾಗಿ ಬೇಕು! ಹೆಗ್ಗಣ ಗಳೊಂದಿಗೆ ಹೋರಾಡಿ ಸುಸ್ತಾಗಿರುವೆ!' ಎಂದಿತು. ಸುಟ್ಟ ಮೀನಿರುವುದು ಐದು ಮಾತ್ರ. ಜಾಲಿಗೆ ಅದಕ್ಕೊಂದು ಹೆಚ್ಚಿಗೆ ಕೊಡಬೇಕಲ್ಲ ಎಂಬ ಸಂಕಟ. ಆದರೆ ಟೆಡ್ಡಿ ಕೇಳಬೇಕಲ್ಲ?

'ನನಗೆ ಮೂರು! ನಿನಗೆ ಎರಡು! ಬೌವ್ ವ್ವೂ!' ಎಂದಿತು ಟೆಡ್ಡಿ.

ಜಾಲಿ ಮ್ಯಾಯೂವ್ ಎನ್ನುತ್ತ ಹಸಿ ಮೀನು ಗಳನ್ನು ಕೆಂಡದ ಮೇಲೆ ಹರಡುತಿದ್ದರೆ ಟೆಡ್ಡಿ ಮೀನುಗಳನ್ನು ಕರಂ ಕರಂ ಎಂದು ಅಗಿಯ ತೊಡಗಿತು.

ಅವನು ಈಗ ಮೂರು ತಿಂದರೇನು! ಅನಂ ತರ ನಾನು ಇನ್ನೊಂದು ಮೀನು ಹೆಚ್ಚು ತೆಗೆದು ಕೊಂಡೇ ತೀರುವೆ ಎಂದು ತನ್ನ ಪಾಲಿನ ಮೀನಿಗೆ ಬಾಯಿ ಹಾಕಿತು, ಜಾಲಿ.

ಅಷ್ಟರೊಳಗಾಗಿ ಟೆಡ್ಡಿ ಮೂರನ್ನೂ ಮುಗಿಸಿ ಬಿಟ್ಟಿದ್ದಾನೆ!



# ವಿದರ್ಭ ದೇಶದಲ್ಲಿ

ಒಂದಾನೊಂದು ಕಾಲದಲ್ಲಿ ಬಹಳ ಸುಖ ಶಾಂತಿಗಳಿಂದ ಕೂಡಿದ್ದ ನಾಡು ವಿದರ್ಭದೇಶ.

ಅದನ್ನು ಸುಕೇಶಿ ಎಂಬ ರಾಜ ಆಳುತ್ತಿದ್ದ. ಅವನ ಆಳ್ವಿಕೆಯಲ್ಲಿ ಜನರೆಲ್ಲಾ ಸುಖದಿಂದ ಜೀವಿಸುತ್ತಿದ್ದರು.

ಮಳೆ ಬೆಳೆಯೂ ಸಮೃದ್ಧಿ. ಸುಖ ಶಾಂತಿಗಳೂ ಸಮೃದ್ಧಿ.

ರಾಜಧಾನಿಗೆ ಸಮೀಪವಾಗಿಯೇ ಒಂದು ಕಡಿದಾದ ಬೆಟ್ಟ. ರಾಜಧಾನಿಯ ಜನ ವಿಹರಿಸುತ್ತಿದ್ದುದು ಅಲ್ಲೇ. ಅಲ್ಲಿಯ ತಣ್ಣನೆಯ ಹವಾಮಾನ ಎಲ್ಲರಿಗೂ ಹಿತ.

ಇದ್ದಕಿದ್ದಂತೆ ರಾತ್ರಿಯಲ್ಲಿ ಬೆಟ್ಟದ ಕಡೆಯಿಂದ ದೊಡ್ಡದನಿಯಲ್ಲಿ ಕಿರುಚಾಟ-ಚೀರಾಟ ಕೇಳಿ ಬರತೊಡಗಿತು. ಯಾರ ಗದ್ದಲ? ಏತಕ್ಕಾಗಿ! ಎಂಬುದು ಯಾರಿಗೂ ತಿಳಿಯದು.

ಜನ ಎಲ್ಲೆಂದರಲ್ಲೇ ಅವಿತುಕೊಳ್ಳುವಷ್ಟು ಭಯ-ದಿಗಿಲು. ಅನಂತರ ಪ್ರತಿದಿನವೂ ಇದೇ

ಗೋಳು. ಕಿರುಚಾಟ-ಕೂಗಾಟ! ಕೈಕೈ ಮಿಲಾಯಿಸಿದ ಮಾರಾಮಾರಿ! ಢಿಡ್ ಢಿಡ್ ಗುದ್ದಾಟ!

ವಿದರ್ಭದೇಶದ ಶಾಂತಿ ಕರಗಿ ಹೋಯಿತು. ಜನ ಹೆದರಿ ಕಂಗಾಲಾದರು. ಬೆಟ್ಟದ ತಲದಲ್ಲಿದ್ದ ಹುಲ್ಲುಗಾವಲೆಲ್ಲ ಪುಡಿ ಪುಡಿ. ಹಗಲು ಹೊತ್ತಿನಲ್ಲಿ ಸದ್ದು ಗದ್ದಲವಿರುತ್ತಿರಲಿಲ್ಲ. ಜನ ಅಲ್ಲಿಗೆ ಹೋಗಿ ಸುತ್ತಾಡಿ ಬರುತ್ತಿದ್ದರು. ಆದರೂ ಗದ್ದಲದ ಗುಟ್ಟು ಏನೆಂಬುದು ಯಾರಿಗೂ ತಿಳಿಯಲಿಲ್ಲ.

ರಾಜನಿಗೂ ಅದೊಂದು ದೊಡ್ಡ ಸಮಸ್ಯೆಯೆ. ಮಂತ್ರಿಗಳೊಂದಿಗೆ ಯೋಚಿಸಿ ಒಂದು ನಿರ್ಧಾರಕ್ಕೆ ಬಂದ.

ಬೆಟ್ಟದ ತಪ್ಪಲಿನಲ್ಲಿ ಒಂದು ಆಳವಾದ ಗುಂಡಿ ತೋಡಿಸಿದ. ಅದರ ಮೇಲೆ ಹಸಿರು ಬಟ್ಟೆ ಹರವಿ, ಹುಲ್ಲಿನ ಕಣೆಗಳಿಂದ ಮುಚ್ಚಿದರು. ನೋಡುವವರಿಗೆ ಅಲ್ಲಿ ದೊಡ್ಡ ಹೊಂಡವಿರುವುದು ತಿಳಿಯದಷ್ಟು ಸೂಕ್ಷ್ಮವಾಗಿ ನಡೆಯಿತು ಕೆಲಸ.

ಹಗಲು ಉರುಳಿ ರಾತ್ರಿಯಾಯಿತು.

ರಾಜ ಮತ್ತು ಪುರ ಜನರು ಮುಂದೇನಾಗುವುದೋ ಎಂದು ಕಾದಿದ್ದರು. ಮಧ್ಯರಾತ್ರಿ ಸಮೀಪಿ

ಸುತ್ತಲೂ ಎಂದಿನಂತೆಯೇ ಕೂಗಾಟ-ಚೀರಾಟ ನೂರಾನೂರಿ ಕೇಳಿಬರತೊಡಗಿತು. ಎದೆ ನಡುಗಿಸುವಂತಹ ಕೂಗು ಸ್ವಲ್ಪ ಹೊತ್ತಿನ ನಂತರ ಬೇರೊಂದು ರೀತಿಗೆ ನೂರ್ಪಟ್ಟಿತು.

ಬೆಳಗಾದರೆ ಎಲ್ಲರಿಗೂ ಕುತೂಹಲ.

ಆ ಹೊಂಡದೊಳಗೆ ಪ್ರಾಣಿ ಬಿದ್ದಿರಲೇಬೇಕು ಎಂಬ ನಂಬಿಕೆಯಿದ್ದರೂ ಒಮ್ಮೆಲೇ ಅಲ್ಲಿಗೆ ಹೋಗುವ ಧೈರ್ಯ ಯಾರಿಗೂ ಇಲ್ಲ. ಆದರೂ ಬಹಳ ಮಂದಿ ಒಟ್ಟಾಗಿ ರಾಜನನ್ನು ಮುಂದಿಟ್ಟುಕೊಂಡು ಹೋದರು. ಕಣ್ಣರಳಿಸಿ ನೋಡಿದರೆ ಆ ಹೊಂಡದಲ್ಲಿ ಇಬ್ಬರು ರಾಕ್ಷಸರು ಬಿದ್ದಿದ್ದಾರೆ! ಒಬ್ಬನಿಗೆ ಕಾಲು ಮುರಿದಿದ್ದರೆ ಇನ್ನೊಬ್ಬನಿಗೆ ಸೊಂಟ ಮುರಿದಿದೆ!

ಇಬ್ಬರಿಗೂ ಬೆಟ್ಟದಮೇಲಿನ ಪ್ರಭುತ್ವಕ್ಕಾಗಿ ಜಗಳ-ಹೋರಾಟ. ಹೊಂಡದಲ್ಲಿ ಬಿದ್ದಿದ್ದರೂ ತಮ್ಮ ತಮ್ಮ ದ್ವೇಷ ಬಿಟ್ಟಿರಲಿಲ್ಲ. ಬಿದ್ದಲ್ಲೇ ಪರಚಾಡಿ ಮೈಕೈ ಗಾಯವಾಗಿ ರಕ್ತ ಸುರಿಯುತಿತ್ತು. ಮೈಬೆವರೂ ಬಸಿದಿದ್ದಾರೆ.

ಜನರೆಲ್ಲಾ ರಾಜನೊಡನೆ ಹೊಂಡದ ಸುತ್ತ ನಿಂತು ಧೈರ್ಯ-ಸಂತೋಷಗಳಿಂದ ನೋಡಿದರು.

ಎಲ್ಲರೂ ನೋಡಿಯೇ ನೋಡಿದರು! ತಕಥೈ ಕುಣಿದು ಕುಪ್ಪಳಿಸಿದರು.

ಹೋ! ಎಂದು ಕೂಗಿದರು ಜನ. ದಮ್ಮಯ್ಯಾ ಎಂದು ಕೈಮುಗಿದು ಬೇಡಿದರು ರಾಕ್ಷಸರು.

ರಾಜ ಸುಮ್ಮನೆ ಬಿಟ್ಟಾನೆಯೇ? ಮಣ್ಣಿನ ರಾಶಿ ಮತ್ತು ಬಂಡೆಗಲ್ಲುಗಳನ್ನು ಅವರ ಮೇಲೆ ಉರುಳಿಸಲು ಹೇಳಿದ. ಒಡನೆ ಜನರೆಲ್ಲಾ ಹಾರೆ-ಪಿಕಾಸಿಗಳನ್ನು ಕೈಕೊಂಡು ಕಲ್ಲು ಮಣ್ಣನ್ನು ಅವರಮೇಲೆ ರಾಚಿದರು! ರಾಕ್ಷಸರು ಕಿರುಚುತಿದ್ದಂತೆಯೇ ಮಣ್ಣಿನ ರಾಶಿಯಲ್ಲಿ ಜೀವಂತ ಮುಳುಗಿ ಹೋದರು.

ಜನ ಸಂತಸದಿಂದ ಕುಣಿದಾಡಿದರು.



# ಒಗ್ಗಟ್ಟು

ಆ ಬಟ್ಟ ಬಯಲಲ್ಲೊಂದು ದೊಡ್ಡ ಆಲದ ಮರ.

ಅದು ತನ್ನ ಸುತ್ತಲೂ ಬಿಳಲುಗಳನ್ನು ಬಿಡುತ್ತ ಬಿಡುತ್ತ ಅಗಲ ಅಗಲವಾಗಿ ಬಯಲನ್ನು ತುಂಬಿಕೊಳ್ಳುವಷ್ಟು ಬೆಳೆದಿತ್ತು.

ಹಚ್ಚ ಹಸುರಿನ ಛತ್ರಿಯಂತೆ ಹರಡಿದ ಅದು ನೋಡಲು ಎಷ್ಟು ಚೆಂದ! ದೂರದಿಂದ ನೋಡಿದರೆ ಅದು ನಿಜಕ್ಕೂ ಹಸಿರು ಛತ್ರಿಯೆ!

ಅದರ ರೆಂಬೆ ರೆಂಬೆಗಳಲ್ಲೂ ಬಗೆ ಬಗೆಯ ಪ್ರಾಣಿಗಳೂ ಪಕ್ಷಿಗಳೂ ಆಶ್ರಯ ಪಡೆದಿದ್ದುವು. ಅವುಗಳಿಗೆ ತಮ್ಮ ತಮ್ಮಲ್ಲಿ ರೋಷ-ದ್ವೇಷಗಳು ಇರಲೇ ಇಲ್ಲ. ಸದಾ ಸ್ನೇಹಾನುರಾಗವೇ ಹೆಚ್ಚು.

ಬಲ ಭಾಗದಲ್ಲಿ ಉದ್ದಕ್ಕೆ ಚಾಚಿದ ದೊಡ್ಡ ರೆಂಬೆಯಲ್ಲಿ ದಟ್ಟವಾಗಿ ಹರಡಿದ ಎಲೆಗೊಂಚಲುಗಳು. ಆ ಗೊಂಚಲುಗಳ ಪುಟ್ಟ ಪುಟ್ಟ ಕವಲುಗಳ ಮೇಲೆ ಅಂದವಾಗಿ ಕಟ್ಟಿದ ನಾಲ್ಕು ಪಕ್ಷಿಗಳ

ಸಣ್ಣ ಸಣ್ಣ ಗೂಡುಗಳು. ಕಲವಿಂಕ, ಪಿಕಳಾರ, ಗಿಳಿ, ಮೈನಾ ಈ ಪಕ್ಷಿಗಳೇ ಅವುಗಳ ಒಡೆಯರು. ಗೂಡುಗಳಲ್ಲಿ ಮೊಟ್ಟೆಯಿಟ್ಟು ಮರಿಮಾಡಿಕೊಂಡು ಸ್ನೇಹದಿಂದ ವಾಸ ಮಾಡುತ್ತಿದ್ದುವು.

ದಿನವೂ ಹೊತ್ತಿಗೆ ಮುಂಚೆ ಏಳುತ್ತಿದ್ದ ಮೈನಾ ಗೋದಿ ತೆನೆ ಅಥವಾ ರಾಗಿ ತೆನೆ ತಂದರೆ ಇತರ ಮರಿಗಳೂ ಗುಟುಕಿಗಾಗಿ ಚ್ಲೀಃ ಸ್ಲೀಃ ಎಂದು ಬಾಯ್ದೆರೆಯುತ್ತಿದ್ದುವು. ಅದರಂತೆಯೇ ಇತರ ಹಕ್ಕಿಗಳು ಗುಟುಕು ತಂದಾಗ ಎಲ್ಲಕ್ಕೂ ಹಂಚಿಕೆಯಾಗುತ್ತಿತ್ತು!

ಅಮ್ಮ ಬಂದಳು ಅಮ್ಮ! ಚ್ಲೀಂ! ಸ್ಲೀಂ!!

ಎಲ್ಲವೂ ಒಮ್ಮೆಗೇ ಲಗ್ಗೆ ಎಬ್ಬಿಸಿದರೆ ಆ ಹಕ್ಕಿ ಹಿಂದಿರುಗಿ ಹೋಗಿ ಪುನಃ ಗುಟುಕು ತರ ಬೇಕಾಗುತ್ತಿತ್ತು.

ತಾಯಿ ಹಕ್ಕಿಗಳು ಯಾವತ್ತೂ ಒಟ್ಟಾಗಿ ಹೊರ ಹೋಗದೆ ಬೇರೆ ಬೇರೆಯಾಗಿಯೇ ಹೋಗು ತ್ತಿದ್ದುವು. ಒಂದು ಹೊರ ಹೋದರೆ ಇನ್ನೊಂದು ಕಾವಲಿರುವ ಸಲುವಾಗಿ ಗೂಡಿನಲ್ಲಿ ಉಳಿಯು ತ್ತಿತ್ತು.

ಒಮ್ಮೆ ಪಿಕಳಾರ ಹೊರ ಹೋದುದು ಹಿಂದಿ ರುಗಿ ಬರಲಿಲ್ಲ. ಅದರ ಮರಿಗಳು ತಾಯಿಗಾಗಿ

ಕಾದು ಕಾದು ಚ್ಲೀಂ! ಪ್ಲೀಂ! ರಾಗ ಹಾಡ ತೊಡಗಿದುವು. ಅದರೊಂದಿಗೆ ಎಲ್ಲಾ ಮರಿಗಳಿಗೂ ಅದೇ ರಾಗ. ಕಿವಿ ಚಿಟ್ಟು ಹಿಡಿಯುವಷ್ಟು ಗದ್ದಲ.

ಮೈನಾ ರೆಕ್ಕೆ ಪುಕ್ಕ ಒದರಿ ಗೆಳೆಯನನ್ನು ಕರೆತರುವುದಾಗಿ ಹೊರಟಿತು. ಕಲವಿಂಕ ಮತ್ತು ಗಿಳಿಗಳು ಮರಿಗಳನ್ನು ಕಾದು ಕುಳಿತುವು. ಎಷ್ಟು ಹೊತ್ತು ಕಳೆದರೂ ಎರಡೂ ಹಿಂದಿರುಗಿ ಬರಲಿಲ್ಲ.

ಕಲವಿಂಕ ಕೊರಳೆತ್ತಿ ಹೇಳಿತು 'ಬೆಳಿಗ್ಗೆ ರೈತ ಬಲೆಯೊಡ್ಡಿದ್ದನ್ನು ಕಂಡಿದ್ದೆ. ಅದು ಬಹಳ ನವುರಾದ ಬಲೆ. ನಮ್ಮವರು ಅದನ್ನು ಕಾಣದೆ ಬಲೆಗೆ ಬಿದ್ದರೋ ಏನೋ....ನನಗೆ ಅದೇ ಭಯ.'

'ದೇವರೆ ಕಾಪಾಡಲಿ!'

ಹೊತ್ತು ಉರುಳಿ ಮಧ್ಯಾಹ್ನ ಅಡರಿತು.

'ಶಿಕಳಾರವನ್ನು ಹುಡುಕಲು ಹೋದ ಮೈನಾ ಹಿಂದಿರುಗಲಿಲ್ಲ. ಏನು ಗತಿ?'

'ನಾನೂ ಹೋಗಿ ಬರುವೆ' ಎಂದ ಗಿಳಿ ತನ್ನ ತನ್ನ ಗೂಡಿನಲ್ಲಿದ್ದ ಕೆಲವು ತೆನೆಗಳನ್ನು ತೆಗೆದು ಹಸಿದ ಎಲ್ಲಾ ಮರಿಗಳಿಗೂ ಗುಟುಕು ಕೊಟ್ಟು ಮುದ್ದು ಮಾಡಿತು. ಆದರೂ ಮರಿಗಳ ಕಣ್ಣು ತಾಯಿಯ ಹಾದಿಯ ಕಡೆಗೆ.

ಅನಂತರ ಎಲ್ಲಾ ಮರಿಗಳನ್ನೂ ಕಾದು ಕೊಂಡಿರಲು ಕಲವಿಂಕನಿಗೆ ಹೇಳಿ ತಾನು ನೋಡಿ ಬರುವುದಾಗಿ ಪುರ್ರನೆ ಹಾರಿ ಹೋಯಿತು ಗಿಳಿ.

ಗದ್ದೆಗೆ ಹೋಗಿ ನೋಡಿದರೆ ನಿಜವಾಗಿಯೂ ರೈತನ ಬಲೆಗೆ ಬಿದ್ದಿದೆ ಪಿಕಳಾರ. ಅದರ ಗೋಳನ್ನು ನೋಡಲಾರದೆ ಮೈನಾ ಅಳುತ್ತಾ-ಚೀರುತ್ತಾ ಅಲ್ಲಲ್ಲೇ ಹಾರಾಡುತ್ತ ಗೋಳಿಡುತ್ತಿದೆ.

ಗಿಳಿ ಅಲ್ಲಿಗೆ ಹೋಗಿ 'ಈಗೇನು ಮಾಡೋಣ?' ಎಂದಿತು.

ಮೂರು ಹಕ್ಕಿಗಳ ಒಡಲು ದುಃಖ ಸಂಕಟ ಗಳಿಂದ ತುಂಬಿ ಹೋಯಿತು.

'ನೀನು ನಿನ್ನ ಕೊಕ್ಕಿನಿಂದ ಬಲೆಯನ್ನು ಹರಿಯ ಬಲ್ಲೆಯಾದರೆ....' ಒಳಗಿನಿಂದ ಪಿಕಳಾರ ಕೂಗಿತು.

'ನನಗಿಂತ ಮೈನಾ ಕೊಕ್ಕು ಹರಿತ' ಎಂದಿತು ಗಿಳಿ.

'ಅದು ಆಗಲೇ ಪ್ರಯತ್ನಿಸಿ ಸೋತಿದೆ. ನಿನ್ನದೇ ತುಂಬ ಹರಿತ. ನೀನೇ ಪ್ರಯತ್ನಿಸು.'

'ಮೂವರೂ ಒಟ್ಟಾಗಿ, ಎಳೆದು ಕತ್ತರಿಸೋಣ.'

'ಆಗಲಿ, ಹೀಗೆಯೇ ಬಾ. ಒಂದೇ ಕಡೆ ಮೂವರು ಕಚ್ಚಿ ಎಳೆಯಬೇಕು.

ಸರಿ ; ಎಳೆದಾಟ ಶುರುವಾಯಿತು. ಮೂವರೂ ಒಟ್ಟಾಗಿ ಒಂದೇ ಎಳೆಯನ್ನು ಕಚ್ಚಿ ಕಚ್ಚಿ ಎಳೆದುವು. ಆ ಎಳೆದಾಟದ ರಭಸಕ್ಕೆ ಒಂದು ಎಳೆ ತುಂಡಾಯಿತು. ಅದನ್ನು ಕಂಡು ಹಕ್ಕಿಗಳಿಗೆ ಇನ್ನಷ್ಟು ಹುರುಪು ಮೂಡಿತು: ಬಿಡದೆ ಕಚ್ಚಿ ಕಚ್ಚಿ ಎಳೆದಾಡಿದುವು.

ಸ್ವಲ್ಪ ಹೊತ್ತಿನೊಳಗಾಗಿ ಬಲೆಯ ಮೂರು ನಾಲ್ಕು ಎಳೆಗಳು ತುಂಡಾದುವು. ಒಳಗಡೆ ಸೆರೆಯಾಗಿದ್ದ ಪಿಕಳಾರ ಆ ಕಿಂಡಿಯಲ್ಲಿ ತಲೆಯನ್ನು ತೂರಿ ಹೊರ ಬಂದಿತು.

ಆಗ ಮೈನಾ, ಗಿಳಿ, ಪಿಕಳಾರಗಳಿಗೆ ಉಂಟಾದ ಆನಂದ ಅಷ್ಟಿಷ್ಟಲ್ಲ. ಮೂರೂ ಒಂದನ್ನೊಂದು ಅಪ್ಪಿ ಮುದ್ದಾಡಿ ಪುರ್ರನೆ ಹಾರಿ ಆಲದಮರವನ್ನು ಸೇರಿದುವು.

'ಏಕೆ ಇಷ್ಟೊತ್ತು ಕಳೆಯಿತು? ಏಕೆ? ಏನಾಯಿತು?' ಕೇಳಿತು ಕಲವಿಂಕ.

'ರೈತನ ಬಲೆಯೊಳಗೆ ಬಿದ್ದಿದ್ದೆ?'

'ಪಿಕಳಾರ! ನಿಜವಾಗಿಯೂ ಬಿದ್ದಿದ್ದೆಯಾ?'

'ಹೌದು! ಎಂಥ ಬಲೆ ಗೊತ್ತಾ? ಕಣ್ಣಿಗೆ ಕಾಣಿಸದಷ್ಟು ನವುರಾದ ಬಲೆ! ಆದರೂ ಅದೆಷ್ಟು ಗಟ್ಟಿ! ಬೆಳಿಗ್ಗೆಯಿಂದ ಅದನ್ನು ಹರಿಯಲು ನಾನು ಪ್ರಯತ್ನಿಸಿ ಸೋತು ಹೋಗಿದ್ದೆ! ಮೈನಾ ಪ್ರಯತ್ನಿಸಿದಾಗಲೂ ಆಗಲಿಲ್ಲ. ಗಿಳಿ ಬಂದ ಮೇಲೆ ಮೂವರೂ ಒಟ್ಟಾಗಿ ಪ್ರಯತ್ನಿಸಿದುದೇ ಸರಿಯಾದ ತಂತ್ರ. ಇಲ್ಲದಿದ್ದಲ್ಲಿ ಬಿಡುಗಡೆಯಾಗುತ್ತಿರಲಿಲ್ಲ. ರೈತನ ಒಡಲಿಗೆ ಕೂಳಾಗುತಿದ್ದೆ.'

'ಇದುವರೆವಿಗೂ ಆ ರೈತ ಬಂದು ನೋಡಿರಲಿಲ್ಲವೇ?'

'ಒಮ್ಮೆ ಬಂದು ಬಲೆಯೆತ್ತಿ ನೋಡಿದ್ದ. ನಾನು ಪುಟ್ಟ ಹಕ್ಕಿ ಅವನಿಗೆ ಕಾಣಲಿಲ್ಲ ಅಷ್ಟೆ.'

'ಕೊನೆಯದಾಗಿ ಒಗಟ್ಟು ನನ್ನನ್ನು ಕಾಪಾಡಿತು.'

ಒಡನೆ ಎಲ್ಲವೂ ಚ್ಚೀ ಪ್ಚೀ ರಾಗ ಹಾಡಿದುವು.



# ಮಲ್ಲಿಕಾ ಕೃತಿಗಳು

ಕಾದಂಬರಿ

1. ಜೀವನಗಂಗಾ
2. ಡಾ|| ಆಘೋರ
3. ಡಾ|| ಕಮಲೇಶ್
4. ವಂದೇ ಮಾತರಂ
5. ಅನಂತಾನಂತದೆಡೆಗೆ

ಕಥಾಸಂಕಲನ

6. ಲಿಯೋನಾ
7. ಶ್ರೀಮುಖಿ
8. ವೈಶಾಖೀಪರ್ವ
9. ಫಾಲ್ಗುಣೀ ಪರ್ವ
10. ಶ್ರೀಹರ್ಷಲಾ
11. ರಮಣೀ ಮಣಿ
12. ರತ್ನಗರ್ಭಾವಸುಂಧರಾ
13. ಬಹುರತ್ನಾವಸುಂಧರಾ

ಕವಿತಾಸಂಕಲನ

14. ಪೂಜಾವಸಾನ ಸಮಯೆ....!
15. ಧ್ಯಾನಾವಸಾನ ಸಮಯೇ!....!
16. ಗಗನ ಕುಸುಮ
17. ಜೀವನ ಕುಸುಮ
18. ನಾದ ಬಿಂದು
19. ಗಾನ ತೀರ್ಥ

ಸಾನೆಟ್ಟುಗಳು

20. ತರಂಗಿಣಿ

ದೇಶಭಕ್ತಿ ಗೀತೆ

21. ವಿಜಯ ಗಾಥಾ

ಪೌರಾಣಿಕ ನಾಟಕ

22. ಪುಣ್ಯಪಯೋಸಿಧಿ
23. ಪುಣ್ಯಾಭಿಸಾರ

ಸಂಜೀವನ ಕಾವ್ಯ

24. ಉತ್ತರೋತ್ತರಣಿ
25. ರಾಗಾನುರಾಗಿಣಿ

ಉಪನಿಷತ್ಕಥಾ

25. ಕೃತಂ ಸ್ಮರ ಕ್ರತುಂ ಸ್ಮರ

ಗದ್ಯ ಕಾವ್ಯ

27. ಐಂದ್ರ ಕೀರ್ತಿ ಕೇತನಂ

ಶಿಶು ಸಾಹಿತ್ಯ

28. ಬೆಳದಿಂಗಳ ರಾತ್ರಿ
29. ದೂರದೇಶದಲ್ಲಿ
30. ವಿಶೇಷ ಸುದ್ದಿ

---

ಲಕ್ಷ್ಮೀ ಪ್ರಕಾಶನ
7, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು-560 025